**4(1)ಬಿ(iv):– ಕರ್ತವ್ಯ ನಿರ್ವಹಿಸುವಲ್ಲಿ ಅನುಸರಿಸಬೇಕಾದ ಮಾದರಿ/ಗೊತ್ತುಪಡಿಸಿದ ನಿಗಧಿಪಡಿಸಿರುವ ಮಾರ್ಗಸೂಚಿಗಳು**

2005ರ ಕರ್ನಾಟಕ ಸರ್ಕಾರ ಸಚಿವಾಲಯದ ಪರಿಷ್ಕೃತ ಕೈಪಿಡಿ, ಸಚಿವಾಲಯ ವಾಹಿನಿ ಹಾಗೂ ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಗಳು, 1977 ಹಾಗೂ ಕಾಲಕಾಲಕ್ಕೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗಳಿಂದ ಹೊರಡಿಸಲಾಗುವ ಆದೇಶ, ಇತರೆ ಸರ್ಕಾರಿ ಆದೇಶಗಳು ಮತ್ತು ಸುತ್ತೋಲೆಗಳು.

**4(1)ಬಿ(v):– ಸಿಬ್ಬಂದಿ/ಅಧಿಕಾರಿಗಳು ಕರ್ತವ್ಯ ನಿರ್ವಹಣೆಯಲ್ಲಿ ಬಳಸುವ ನಿಯಮಗಳ, ಕಾಯಿದೆಗಳ ಮತ್ತು ಸೂಚನೆಗಳ ಕೈಪಿಡಿಗಳ ವಿವರ:**

1. 2005 ಕರ್ನಾಟಕ ಸರ್ಕಾರ ಸಚಿವಾಲಯದ ಪರಿಷ್ಕೃತ ಕೈಪಿಡಿ
2. ಮಾಹಿತಿ ಹಕ್ಕು ಅಧಿನಿಯಮ 2005
3. ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958
4. ಕರ್ನಾಟಕ ಸಾದಿಲ್ವಾರು ವೆಚ್ಚದ ಕೈಪಿಡಿ, 1958
5. ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಗಳು 1977
6. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ – 1999
7. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ (ತಿದ್ದುಪಡಿ) ಅಧಿನಿಯಮ–2001
8. ಆರ್ಥಿಕ ಇಲಾಖೆಯಿಂದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಆದೇಶಗಳು.
9. ಕರ್ನಾಟಕ ನ್ಯಾಯಾಂಗ ಅಧಿಕಾರಿಗಳ (ವೈದ್ಯಕೀಯ ಹಾಜರಾತಿ) ನಿಯಮಗಳು 2009
10. ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963
11. ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977
12. ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು, 1966
13. ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ) ನಿಯಮಗಳು, 1957
14. ಕರ್ನಾಟಕ ಆರ್ಥಿಕ ಸಂಹಿತೆ, 1958
15. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಆರ್ಥಿಕ ಇಲಾಖೆ ಹೊರಡಿಸಿರುವ ಆದೇಶ/ಸುತ್ತೋಲೆ
16. ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977
17. ನೋಟರಿ ಅಧಿನಿಯಮ ಮತ್ತು ನಿಯಮಗಳು
18. ದಿ ಕರ್ನಾಟಕ ಕಂಡಕ್ಟ್ ಆಫ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್, 1985
19. ದಿ ವಕ್ಫ್ ಆಕ್ಟ್ 1995,
20. ಕರ್ನಾಟಕ ವಕ್ಫ್ ನಿಯಮಗಳು 1997,
21. ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ನಿಯಮ
22. ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದಿಂದ ಸೌಲಭ್ಯ ಪಡೆಯಲು ಇರುವ ಷರತ್ತು ಮತ್ತು ನಿಬಂಧನೆಗಳ ನಿಯಮ (ಸಂಖ್ಯೆ: RD 39 WGA 91)
23. ಕರ್ನಾಟಕ ವಕ್ಫ್ ಸಂಸ್ಥೆಗಳ ಅನುದಾನ ಸಂಹಿತೆ (No. RD 139 CWF 77, Dated: 23–08–1979)
24. ಹಜ್ ಸಮಿತಿ ಅಧಿನಿಯಮ 2002, (ಕೇಂದ್ರ ಕಾಯ್ದೆ)
25. ಖಾಜಿ ಕಾಯ್ದೆ 1880
26. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾಯ್ದೆ 1994.

**4(1)ಬಿ(vi):– ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ವಿವರ ಪಟ್ಟಿ:**

ಸಚಿವಾಲಯ ವಾಹಿನಿ ಮೇರೆಗೆ ಸಂಬಂಧಪಟ್ಟ ಶಾಖೆಗಳಲ್ಲಿ ಎಲ್ಲಾ ಕಡತಗಳು ಹಾಗೂ ಹಿಂದೆ ಮುಕ್ತಾಯಗೊಂಡಂತಹ ಪ್ರಮುಖ ಕಡತಗಳು ಲಭ್ಯವಿರುತ್ತದೆ. ಆಪ್ತ ಶಾಖೆಯಲ್ಲಿ ಯಾವುದೇ ಕಡತಗಳನ್ನು ಸೃಜಿಸುವುದಿಲ್ಲ.

**4(1)ಬಿ(vii):– ಕಾರ್ಯನೀತಿ ರಚನೆ ಅಥವಾ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವ ಯಾವುದೇ ವ್ಯವಸ್ಥೆಯ ವಿವರ:**

ಆಪ್ತ ಶಾಖೆಯಲ್ಲಿ ಈ ತರಹದ ವ್ಯವಸ್ಥೆ ಮಾಡಿಕೊಂಡಿರುವುದಿಲ್ಲ.

**4(1)ಬಿ(viii):– ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಅಥವಾ ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳ, ಪರಿಷತ್ತುಗಳ ಸಮಿತಿಗಳ ಮತ್ತು ಇತರ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತವಾಗಿರುತ್ತವೆಯೋ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತವೆಯೋ ಎಂಬುದರ ವಿವರ ಪಟ್ಟಿ:**

ಇದು ಆಪ್ತಶಾಖೆಯಾಗಿರುವುದರಿಂದ ಇಲ್ಲಿ ಮೇಲೆ ಹೇಳಿರುವ ವಿವರಗಳ ಪಟ್ಟಿ ಲಭ್ಯವಿರುವುದಿಲ್ಲ. ಸಾರ್ವಜನಿಕರು ಈ ತರಹದ ಮಾಹಿತಿಗಳನ್ನೇನಾದರೂ ಕೇಳಿದರೆ ಅವರಿಗೆ ಸಂಬಂಧಪಟ್ಟ ಶಾಖೆಗಳನ್ನು ಸಂಪರ್ಕಿಸಲು ತಿಳಿಸಲಾಗುವುದು.

**4(1) ಬಿ (ix) & (x):– ಪ್ರಧಾನ ಕಾರ್ಯದರ್ಶಿ ಹಾಗೂ ಆಪ್ತ ಶಾಖೆಯ ನೌಕರರ ಮಾಹಿತಿ ಹಾಗೂ ಪಡೆಯುತ್ತಿರುವ ವೇತನ.**

| ಕ್ರಮ ಸಂಖ್ಯೆ | ಹುದ್ದೆ | ಹೆಸರು ಶ್ರೀ/ಶ್ರೀಮತಿ | ದೂರವಾಣಿ ಸಂಖ್ಯೆ | ಮಾಸಿಕ ವೇತನ |
|---|---|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಡಾ.ಎನ್.ನಾಗಾಂಬಿಕ ದೇವಿ | 22200623<br>22034440 | |
| 2. | ಆಪ್ತ ಕಾರ್ಯದರ್ಶಿ (ಗ್ರೇಡ್–2) | ಎನ್.ಯು. ಶಿವು | 22034440 | 36,000/– |
| 3. | ಪತ್ರಾಂಕಿತ ಆಪ್ತ ಸಹಾಯಕರು | | | |
| 4. | ಶೀಘ್ರಲಿಪಿಗಾರರು | ರಂಜಿತ ವಿ | 22034440 | 26,250/– |
| 5. | ಕಿರಿಯ ಸಹಾಯಕರು | ಮೋಹನಕುಮಾರ್ | 22034440 | 24,175 |
| 6. | ಜಮೇದಾರ್ | | 22034440 | |
| 7. | ದಲಾಯತ್ | ದಲಾಯತ್, (ನಿಯೋಜನೆ ಮೇಲೆ) | 22034440 | 16,920/– |
| 8. | ವಾಹನ ಚಾಲಕರು | ನಿಯೋಜನೆ ಮೇಲೆ | 22034440 | 16,920/– |

**4(1) ಬಿ (xi):– ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸುವ ಪ್ರಸ್ತಾವಿತ ವೆಚ್ಚಗಳನ್ನು ಮತ್ತು ಮಾಡಲಾದ ಬಟವಾಡೆಗಳ ವರದಿಯನ್ನು ಸೂಚಿಸಿ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ.**

ಇದು ಪ್ರಧಾನ ಕಾರ್ಯದರ್ಶಿಯವರ ಆಪ್ತಶಾಖೆ ಆಗಿರುವುದರಿಂದ ಮೇಲೆ ಹೇಳಿರುವ ಕಾರ್ಯಗಳು ಸಂಬಂಧಪಡುವುದಿಲ್ಲ.

**4(1) ಬಿ (xii):– ಹಂಚಿಕೆ ಮಾಡಲಾದ ಮೊಬಲಗುಗಳನ್ನೊಳಗೊಂಡು, ಸಹಾಯ ಧನ ಕಾರ್ಯಕ್ರಮಗಳನ್ನು ಜಾರಿಯ ವಿಧಾನವನ್ನು ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರ:**

ಇದು ಆಪ್ತಶಾಖೆ ಆಗಿರುವುದರಿಂದ ಮೇಲೆ ಹೇಳಿರುವ ಕಾರ್ಯಗಳು ಸಂಭಂದಪಡುವುದಿಲ್ಲ.

**4(1) ಬಿ (xiii):– ರಿಯಾಯಿತಿಗಳನ್ನು ಪಡೆಯುವವರ, ಅನುಮತಿಗಳು ಅಥವಾ ಸಾರ್ವಜನಿಕ ಪ್ರಾಧಿಕಾರದಿಂದ ಮಂಜೂರಾದ ಅಧಿಕಾರ ಪತ್ರಗಳ ವಿವರಗಳು:**

**"ಅನ್ವಯಿಸುವುದಿಲ್ಲ"**

**4(1) ಬಿ (xiv):– ವಿದ್ಯುನ್ಮಾನ ರೂಪದಲ್ಲಿ ಲಭ್ಯವಿರುವ ಇಲಾಖೆಯ ವಿವಿಧ ಯೋಜನೆಗಳ ವಿವರಗಳು ಮಾಹಿತಿಯನ್ನು ಒದಗಿಸುವುದು (ಫ್ಲಾಪಿ, ಸಿಡಿ, ವಿಸಿಡಿ, ವೆಬ್‌ಸೈಟ್ ಎಂಟರ್‌ನೆಟ್ ಇತ್ಯಾದಿ)**

ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಗೆ ಸಂಬಂಧಪಟ್ಟ ಮಾಹಿತಿಗಳು ಇಲಾಖೆಯ ಮತ್ತು ಅಧೀನ ಇಲಾಖೆಯ ಈ ಕೆಳಕಾಣಿಸಿದ ವೆಬ್‌ಸೈಟ್‌ಗಳಲ್ಲಿ ಲಭ್ಯವಿರುತ್ತದೆ.

1) ಕೇಂದ್ರ ಅಲ್ಪಸಂಖ್ಯಾತರ ಕಲ್ಯಾಣ ಮಂತ್ರಾಲಯ – www.minorityaffairs.gov.in
2) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ - www.karmin.in
3) ಅಲ್ಪಸಂಖ್ಯಾತರ ನಿರ್ದೇಶನಾಲಯ - www.gokdom.com
4) ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ - www.kmdc.in
5) ಕರ್ನಾಟಕ ರಾಜ್ಯ ವಕ್ಫ್ ಮಂಡಳಿ - www.karwakf.org
6) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನಾ - www.kswwf.com
7) ಮೌಲಾನಾ ಅಜಾದ್ ಎಜುಕೇಷನ ಫೌಂಡೇಷನ್ – www.maef.nic.in
8) ಕರ್ನಾಟಕ ರಾಜ್ಯ ಹಜ್ ಸಮಿತಿ - www.karhaj.in
9) ಕೌನ್ಸಿಲಿಂಗ್ ಸೆಂಟರ್ ಫಾರ್ ಎಜುಕೇಷನ್ ಅಂಡ್ ಎಂಪ್ಲೈಮೆಂಟ್ ಫಾರ್ ಮೈನಾರಿಟೀಸ್ - www.minorityguidance.com

**4(1) ಬಿ (xv):– ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳ ಬಗ್ಗೆ ವಿವರಗಳು.**

ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಗೆ ಸಂಬಂಧಪಟ್ಟ ಮಾಹಿತಿಗಳು ಇಲಾಖೆಯ ವೆಬ್‌ಸೈಟ್ www.minoritywelfare.com ನಲ್ಲಿ ನಾಗರೀಕರು ಪಡೆದುಕೊಳ್ಳಬಹುದು. ಹಾಗೂ ಕರ್ನಾಟಕ ಮಾಹಿತಿ ಹಕ್ಕು ಕಾಯ್ದೆಯನ್ವಯ ಇಲಾಖೆಯ ವತಿಯಿಂದ ನೇಮಕಗೊಂಡ ಮಾಹಿತಿ ಅಧಿಕಾರಿಗಳ ಮೂಲಕ ಮಾಹಿತಿಗಳನ್ನು ಪಡೆದುಕೊಳ್ಳಬಹುದು.

**4(1) ಬಿ (xvi):– ಸಾರ್ವಜನಿಕರಿಗೆ ಮಾಹಿತಿ ಅಧಿಕಾರಿಗಳ ಹೆಸರುಗಳು, ಪದನಾಮಗಳು ಮತ್ತು ಇತರೆ ಮಾಹಿತಿ:**

ಇದು ಆಪ್ತಶಾಖೆ ಆಗಿರುವುದರಿಂದ ಸಂಬಂಧಪಟ್ಟ ಮಾಹಿತಿಯನ್ನು ಆಯಾ ಶಾಖೆಗಳಿಂದ ಪಡೆಯಬಹುದು.

**4(1) ಬಿ (xvii):– ನಿಯಮಿಸಬಹುದಾದಂತಹ ಮಾಹಿತಿಗಳನ್ನು ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ ಪ್ರತಿವರ್ಷ ಈ ಪ್ರಕಟಣೆಗಳನ್ನು ಅಂದಿನವರೆಗೆ ಪರಿಷ್ಕರಿಸತಕ್ಕದ್ದು:**

ಅನ್ವಯಿಸುವುದಿಲ್ಲ.

**4(1) ಬಿ (i):– ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಯ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆಯ ರಚನೆ.**




**ಕಾರ್ಯಗಳು ಮತ್ತು ಕರ್ತವ್ಯಗಳು:**

ಉಪ ಕಾರ್ಯದರ್ಶಿ, ಇವರು ಇಲಾಖೆಗೆ ಸಂಬಂಧಿಸಿದ ಎಲ್ಲಾ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಹಾಗೂ ಪ್ರಮುಖ ವಿಷಯಗಳ ಮೇಲೆ ನೀತಿ ನಿಯಮಗಳನ್ನು ರೂಪಿಸುವ ಬಗ್ಗೆ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರಸ್ತಾವನೆಗಳನ್ನು ಮಂಡಿಸುವುದು ಹಾಗೂ ಇಲಾಖೆಯಲ್ಲಿ ಸಂಘಟನೆ ಮತ್ತು ವಿಧಾನಗಳ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಾರೆ.

ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಯ ಹಜ್ ಮತ್ತು ವಕ್ಫ್ ಶಾಖೆಯ ಆಡಳಿತಾತ್ಮಕ ವಿಷಯಗಳಿಗೆ ಸಂಬಂಧಿಸಿದ ಉಪ ಕಾರ್ಯದರ್ಶಿಯವರ ಹುದ್ದೆಗೆ ಪೂರಕ ಸಿಬ್ಬಂದಿ ಈ ಆಪ್ತ ಶಾಖೆಯಲ್ಲಿ ಈ ಕೆಳಕಂಡಂತೆ ಕಾರ್ಯನಿರ್ವಹಿಸುತ್ತಾರೆ.

1. ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆಯಿಂದ ಸ್ವೀಕರಿಸಲಾಗುವ ಪತ್ರಗಳು ಹಾಗೂ ಕಡತಗಳ ನಿರ್ವಹಣೆ.
2. ಅಧೀನ ಕಾರ್ಯದರ್ಶಿಯವರಿಂದ ಸ್ವೀಕೃತವಾಗುವ ಪ್ರಸ್ತಾವನೆಗಳನ್ನು ಉಪ ಕಾರ್ಯದರ್ಶಿಯವರ ಪರಿಶೀಲನೆ ನಂತರ ಸ್ಪಷ್ಟ ಅಭಿಪ್ರಾಯದೊಂದಿಗೆ ಪ್ರಧಾನ ಕಾರ್ಯದರ್ಶಿಯವರಿಗೆ ಸಲ್ಲಿಸುವುದು ಹಾಗೂ ಸಂಬಂಧಪಟ್ಟ ವಿಭಾಗಗಳಿಗೆ/ಶಾಖೆಗಳಿಗೆ ರವಾನಿಸುವುದು.
3. ಉಪ ಕಾರ್ಯದರ್ಶಿಯವರು ನೀಡುವ ಉಕ್ತಲೇಖನವನ್ನು ಶೀಘ್ರಲಿಪಿಯಲ್ಲಿ ಬರೆದುಕೊಳ್ಳುವುದು ಹಾಗೂ ಅದನ್ನು ಸಂಬಂಧಪಟ್ಟ ಕಡತದಲ್ಲಿ ದಾಖಲಿಸಿ ನೀಡುವುದು.
4. ಅಧಿಕಾರಿಯ ಕಾರ್ಯಕಲಾಪ, ಸಭೆ ಮುಂತಾದವುಗಳ ಬಗ್ಗೆ ಮಾಹಿತಿ ನಿರ್ವಹಣೆ
5. ಆಪ್ತ ಶಾಖೆಗೆ ಸಚಿವಾಲಯ ಕೈಪಿಡಿಯಲ್ಲಿ ವಹಿಸಿರುವ ಇತರೆ ಕಾರ್ಯಗಳು

**4(1) ಬಿ (ii):– ಅಧಿಕಾರಿ ಮತ್ತು ನೌಕರರುಗಳ ಹೊಣೆಗಾರಿಕೆ ಮತ್ತು ಕರ್ತವ್ಯಗಳು.**

| | |
|---|---|
| 1) ಉಪ ಕಾರ್ಯದರ್ಶಿ: | ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಂದ ಸ್ವೀಕೃತಗೊಂಡಂತಹ ಟಪಾಲುಗಳು ಹಾಗೂ ಕಡತಗಳಲ್ಲಿ ನಿರ್ದೇಶಿಸಲ್ಪಟ್ಟಿರುವ ವಿಷಯಗಳನ್ನು ಕಾರ್ಯರೂಪಕ್ಕೆ ತರುವುದು. ಹಾಗೂ ಅಧಿಕಾರಿಗಳಿಂದ ಸ್ವೀಕೃತವಾಗುವ ಕಡತಗಳನ್ನು ಪರಿಶೀಲಿಸಿ ಕ್ರಮಕೈಗೊಳ್ಳುವುದು ಇವರ ಅಧಿಕಾರ ವ್ಯಾಪ್ತಿಗೆ ಒಳಪಡದ ವಿಷಯಗಳನ್ನು ಪ್ರಧಾನ ಕಾರ್ಯದರ್ಶಿಯವರ ಅನುಮೋದನೆಗಾಗಿ ಸ್ಪಷ್ಟ ಅಭಿಪ್ರಾಯದೊಂದಿಗೆ ಸಲ್ಲಿಸುವುದು. ಇವರು ಇಲಾಖೆಗೆ ಸಂಬಂಧಪಟ್ಟಂತೆ ಓ ಅಂಡ್ ಎಂ. ಅಧಿಕಾರಿ, ಹಾಗೂ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಲ್ಪಟ್ಟಿರುವ ಅಧಿಕಾರಿ, ಇಲಾಖಾ ಖರೀದಿ ಸಮಿತಿ ಹಾಗೂ ಮಾಹಿತಿ ಹಕ್ಕು ಅಧಿನಿಯಮ–2005ಕ್ಕೆ ಸಂಬಂಧಪಟ್ಟಂತೆ ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ. ಸಚಿವಾಲಯ ಇಲಾಖೆ ಮತ್ತು ಅದರ ನಿಯಂತ್ರಣದಲ್ಲಿರುವ ಕ್ಷೇತ್ರ ಇಲಾಖೆಗಳಿಗೆ ಸಂಬಂಧಿಸಿದ ಆಡಳಿತಾತ್ಮಕ ವಿಷಯಗಳು, ಕಛೇರಿ ಕಾರ್ಯ ವಿಧಾನ ಮತ್ತು ಇತರ ಸಂಬಂಧಿತ ವಿಷಯಗಳಿಗೆ ಸಂಬಂಧಪಟ್ಟ ಸ್ಥಾಯಿ ನಿಯಮಗಳು, ಆದೇಶಗಳು ಮುಂತಾದವುಗಳನ್ನು ಜಾರಿಗೊಳಿಸುವುದು ಮತ್ತು ಅವಶ್ಯವಿರುವೆಡೆ ಅವುಗಳ ಪರಿಪಾಲಿತವಾಗುವಂತೆ ನೋಡಿಕೊಳ್ಳುವುದು. ಕಾಲಕ್ಕನುಗುಣವಾಗಿ ಇಲಾಖಾ |

| | |
|---|---|
| | ಅಭಿವೃದ್ಧಿಗೆ ಸಂಬಂಧಿಸಿದ ವಿಷಯಗಳನ್ನು ಅನುಷ್ಠಾನಗೊಳಿಸುವುದು. ಅಧಿಕಾರಿ/ನೌಕರರುಗಳ ಸೇವಾ ವಿಷಯಕ್ಕೆ ಸಂಬಂಧಪಟ್ಟಂತೆ ನಿರ್ಣಯಗಳು, ಸಚಿವಾಲಯದ ಕೈಪಿಡಿಯಲ್ಲಿ ಈ ಹುದ್ದೆಗೆ ಸೂಚಿಸಿರುವಂತೆ ಕ್ರಮ ಕೈಗೊಳ್ಳುವುದು. |
| 2) ಶೀಘ್ರಲಿಪಿಗಾರರು: | ಉಪಕಾರ್ಯದರ್ಶಿಯವರ ಆದೇಶದ ಮೇರೆಗೆ ಉಕ್ತಲೇಖನವನ್ನು ಶೀಘ್ರಪಿಲಿಯಲ್ಲಿ ಬರೆದುಕೊಳ್ಳುವುದು ಹಾಗೂ ಅದನ್ನು ಗಣಕಯಂತ್ರದಲ್ಲಿ ಬೆರಳಚ್ಚಿಸಿ ಸಲ್ಲಿಸುವುದು. ದೂರವಾಣಿ ಕರೆಗಳನ್ನು ಸ್ವೀಕರಿಸಿ ವಿಷಯವನ್ನು ಉಪ ಕಾರ್ಯದರ್ಶಿಯವರಿಗೆ ತಲುಪಿಸುವುದು. ಉಪ ಕಾರ್ಯದರ್ಶಿಯವರಿಂದ ಸೂಚಿಸಲ್ಪಟ್ಟ ಇತರೆ ಕಛೇರಿ ಕೆಲಸಗಳು. ಹಾಗೂ ಸಚಿವಾಲಯದ ಕೈಪಿಡಿಯಲ್ಲಿ ಈ ಹುದ್ದೆಗೆ ಸೂಚಿಸಿರುವಂತೆ ಆಪ್ತ ಶಾಖೆಯ ಇನ್ನಿತರೆ ಕೆಲಸಗಳು |
| 3) ಕಿರಿಯ ಸಹಾಯಕರು: | ಕಿರಿಯ ಸಹಾಯಕರಿಗೆ ನಿಗದಿಪಡಿಸಿದ ರಿಜಿಸ್ಟರ್‌ಗಳನ್ನು ನಿರ್ವಹಿಸುವುದು. ವಿಷಯದ ಕಡತಗಳನ್ನು ದಾಖಲೆಯಿಡುವುದು ಮತ್ತು ರವಾನಿಸುವುದು. ಇವುಗಳ ಜೊತೆಗೆ ಕಿರಿಯ ಸಹಾಯಕನು, ತ:ಖ್ತೆಗಳ, ನಿಯತಕಾಲಿಕ ಸವಿವರಣೆಗಳ ತಯಾರಿಕೆ, ಉಪಕಾರ್ಯದರ್ಶಿಯವರಿಗೆ ಬರುವ ಕಡತ ಮತ್ತು ಪತ್ರಗಳನ್ನು ಗಣಕಯಂತ್ರ ಹಾಗೂ ಚಲನವಲನ ಪುಸ್ತಕದ ಮುಖಾಂತರ ಸ್ವೀಕರಿಸಿ, ಚಲನವಲನ ನಿರ್ವಹಣೆ, ಮೇಲಧಿಕಾರಿಗಳು ಸೂಚಿಸುವ ಇನ್ನಿತರೆ ಕೆಲಸಗಳು ಹಾಗೂ ಸಚಿವಾಲಯದ ಕೈಪಿಡಿಯಲ್ಲಿ ಈ ಹುದ್ದೆಗೆ ಸೂಚಿಸಿರುವಂತೆ ಇನ್ನಿತರೆ ಕೆಲಸಗಳು. |
| 4) ದಲಾಯತ್: | ಕಛೇರಿಯನ್ನು ಅಚ್ಚುಕಟ್ಟಾಗಿ ಚೊಕ್ಕಟವಾಗಿಡುವುದು. ಇತರೆ ಶಾಖೆಗಳಿಗೆ/ ಇಲಾಖೆಗಳಿಗೆ ಕಡತಗಳನ್ನು ಹಾಗೂ ಟಪಾಲುಗಳನ್ನು ತಲುಪಿಸುವುದು. ಕಛೇರಿಯ ಮೇಲಧಿಕಾರಿಗಳು ಸೂಚಿಸುವ ಕೆಲಸಗಳು ಹಾಗೂ ಸಚಿವಾಲಯದ ಕೈಪಿಡಿಯಲ್ಲಿ ಈ ಹುದ್ದೆಗೆ ಸೂಚಿಸಿರುವಂತೆ ಇನ್ನಿತರೆ ಕೆಲಸಗಳ ನಿರ್ವಹಣೆ. |

**4(1) ಬಿ (iii):–ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

**ಉಪಕಾರ್ಯದರ್ಶಿ:–** ಸಚಿವಾಲಯ ಕೈಪಿಡಿಯ ಮೇರೆಗೆ ಪ್ರಧಾನ ಕಾರ್ಯದರ್ಶಿಯವರ ಮತ್ತು ಮಾನ್ಯ ಸಚಿವರ ಆದೇಶ ಮತ್ತು ಸೂಚನೆಗಳನ್ನು ಅನುಷ್ಠಾನಗೊಳಿಸುವುದು. ಇಲಾಖೆಯ ಸಂಘಟನಾ ಮತ್ತು ವಿಧಾನಗಳ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು. ಅಧೀನಾಧಿಕಾರಿಗಳಿಂದ ಹಾಗೂ ಕಾರ್ಯನಿರತ ವಿಭಾಗಗಳಿಂದ ಸ್ವೀಕೃತವಾಗುವ ಪ್ರಸ್ತಾವನೆಗಳಿಗೆ ಉಪ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಅನುಮೋದನೆ ನೀಡುವುದು ಸಂದರ್ಭಾನುಸಾರ ಪ್ರಧಾನ ಕಾರ್ಯದಶಿಯವರ ಅನುಮೋದನೆ, ಅಭಿಪ್ರಾಯ ಅಥವಾ ಆದೇಶಕ್ಕೆ ಸಲ್ಲಿಸುವುದು.

**ಶೀಘ್ರಲಿಪಿಗಾರರು:–**ಉಪಕಾರ್ಯದರ್ಶಿಯವರ ಆಪ್ತ ಸಹಾಯಕರಾಗಿ ಕಾರ್ಯ ನಿರ್ವಹಿಸುವರು ಹಾಗೂ ಅವರ ಸೂಚನೆಯ ಮೇರೆಗೆ ಕ್ರಮಕೈಗೊಳ್ಳುವುದು.

**ಕಿರಿಯ ಸಹಾಯಕರು:–**ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ ಮೇರೆಗೆ ಉಪ ಕಾರ್ಯದರ್ಶಿಯವರಿಗೆ ಬರುವ ಎಲ್ಲಾ ಕಡತಗಳ ಮತ್ತು ಪತ್ರಗಳ ದಿನಚರಿ ಕೆಲಸ, ಚಲನವಲನ ಕೆಲಸವನ್ನು ಹಾಗೂ ರವಾನೆ ಕಾರ್ಯಗಳನ್ನು ಅಂದಂದೇ ನಿರ್ವಹಿಸುವುದು.

**ದಾಲಾಯತ್:–** ಕಛೇರಿಯ ಸಮಯಕ್ಕೆ ಮುಂಚೆಯೇ ಹಾಜರಾಗಿ ಕಛೇರಿಯನ್ನು ಸ್ವಚ್ಛವಾಗಿಡುವುದು. ಕಡತ/ ಟಪಲುಗಳನ್ನು ಸಂಬಂಧಪಟ್ಟ ವಿಭಾಗ/ಶಾಖೆಗಳಿಗೆ ಕೂಡಲೇ ಅಂದಂದೇ ತಲುಪಿಸುವುದು.

**4(1)ಬಿ(iv):– ಕರ್ತವ್ಯ ನಿರ್ವಹಿಸುವಲ್ಲಿ ಅನುಸರಿಸಬೇಕಾದ ಮಾದರಿ/ಗೊತ್ತುಪಡಿಸಿದ ನಿಗದಿಪಡಿಸಿರುವ ಮಾರ್ಗಸೂಚಿಗಳು:**

2005ರ ಕರ್ನಾಟಕ ಸರ್ಕಾರ ಸಚಿವಾಲಯದ ಪರಿಷ್ಕೃತ ಕೈಪಿಡಿ, ಸಚಿವಾಲಯ ವಾಹಿನಿ ಹಾಗೂ ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಗಳು, 1977 ಹಾಗೂ ಕಾಲಕಾಲಕ್ಕೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಆರ್ಥಿಕ ಇಲಾಖೆಗಳಿಂದ ಹೊರಡಿಸಲಾಗುವ ಆದೇಶ, ಇತರೆ ಸರ್ಕಾರಿ ಆದೇಶಗಳು ಮತ್ತು ಸುತ್ತೋಲೆಗಳು.

ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಖ್ ಜನಾಂಗದವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಸದರಿ ಜನಾಂಗಕ್ಕೆ ಸೇರಿದ ಖಾಸಗಿ ಸಂಘ ಸಂಸ್ಥೆಗಳು ಅವರ ಅನುಕೂಲಕ್ಕಾಗಿ ಶಾದಿಮಹಲ್/ಸಮುದಾಯಭವನಗಳ ನಿರ್ಮಾಣಕ್ಕಾಗಿ ಗರಿಷ್ಠ ಮಿತಿ ಜಿಲ್ಲಾ ಕೇಂದ್ರಗಳಲ್ಲಿ ರೂ. 100.00 ಲಕ್ಷಗಳಿಗೆ ಮೀರದಂತೆ ಮತ್ತು ಇತರೆ ಸ್ಥಳಗಳಲ್ಲಿ ರೂ. 50.00 ಲಕ್ಷಕ್ಕೆ ಮೀರದಂತೆ ಮತ್ತು ಇತರೆ ಸ್ಥಳಗಳಲ್ಲಿ ರೂ. 50.00 ಲಕ್ಷಕ್ಕೆ ಮೀರದಂತೆ ಅನುದಾನ ಮಂಜೂರು ಮಾಡುವ ಕಾರ್ಯಕ್ರಮಕ್ಕೆ ಸರ್ಕಾರಿ ಆದೇಶ ಸಂಖ್ಯೆ: ಸಕಇ 91 ಅಸಂಯೋ 2006, ದಿನಾಂಕ: 17–07–2006 ರಲ್ಲಿ ಗೊತ್ತುಪಡಿಸಲಾದ ಷರತ್ತುಗಳು ಈ ಕೆಳಕಂಡಂತಿರುತ್ತದೆ.

1) ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ ಶಾದಿಮಹಲ್/ಸಮುದಾಯ ಭವನಗಳ ನಿರ್ಮಾಣದ ಅಂದಾಜಿನ ಮೊತ್ತವು ರೂ. 50.00 ಲಕ್ಷಗಳಿಗಿಂತ ಕಡಿಮೆ ಇರಕೂಡದು ಮತ್ತು ಸರ್ಕಾರದ ಆರ್ಥಿಕ ಸಹಾಯವು (ಅನುದಾನ) ಕಟ್ಟಡದ ಪ್ರಸ್ತಾವನೆಯ ಶೇಕಡ 50ಕ್ಕೆ ಸೀಮಿತಗೊಳಿಸಲಾಗಿದೆ. ಯಾವುದೇ ಪ್ರಕರಣದಲ್ಲಿ ರೂ. 50.00 ಲಕ್ಷಗಳಿಗಿಂತ ಹೆಚ್ಚಾಗಿ ಸರ್ಕಾರಿ ಅನುದಾನ ನೀಡಲಾಗುವುದಿಲ್ಲ.
2) ಜಿಲ್ಲಾ ಕೇಂದ್ರೇತರ ಸ್ಥಾನಗಳಲ್ಲಿ ಶಾದಿಮಹಲ್/ಸಮುದಾಯ ಭವನಗಳ ನಿರ್ಮಾಣದ ಅಂದಾಜಿನ ಮೊತ್ತವು ರೂ. 20.00 ಲಕ್ಷಗಳಿಗಿಂತ ಕಡಿಮೆ ಇರಕೂಡದು ಮತ್ತು ಸರ್ಕಾರದ ಆರ್ಥಿಕ ಸಹಾಯವು (ಅನುದಾನ) ಕಟ್ಟಡದ ಪ್ರಸ್ತಾವನೆಯ ಶೇಕಡ 50ಕ್ಕೆ ಸೀಮಿತಗೊಳಿಸಲಾಗಿದೆ. ಯಾವುದೇ ಪ್ರಕರಣದಲ್ಲಿ ರೂ. 20.00 ಲಕ್ಷಗಳಿಗಿಂತ ಹೆಚ್ಚಾಗಿ ಸರ್ಕಾರಿ ಅನುದಾನ ನೀಡಲಾಗುವುದಿಲ್ಲ.
3) ಯೋಜನೆಯ ನಕಾಶೆ ಮತ್ತು ಅಂದಾಜು ಮೊತ್ತವನ್ನು ನೊಂದಾಯಿತ ಅಭಿಯಂತರರು (Registered Engineer)/ದೃಢೀಕರಿತ ಅಭಿಯಂತರರು (Certified Engineer) ಅನುಮೋದಿತ ಮೌಲ್ಯಮಾಪನಕಾರ (Approved Valuer) ಪರವಾನಿಗೆ ಪಡೆದ ಅಭಿಯಂತರರು (Licensed Engineer)

ಅಥವಾ ಜಿಲ್ಲಾ ಪಂಚಾಯತ್ತಿನ ಇಂಜಿನಿಯರಿಂದ ಡಿಪಾರ್ಟ್‌ಮೆಂಟ್ ಅಥವಾ ಲೋಕೋಪಯೋಗಿ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ದಕ್ಷ ಸರ್ಕಾರಿ ಅಭಿಯಂತರರು ಇವರುಗಳು ದಾಖಲಾತಿಗಳನ್ನು ಪರಿಶೀಲಿಸಿ ದೃಢೀಕರಿಸಬೇಕಾಗಿರುತ್ತದೆ.

4) ಶಾದಿಮಹಲ್/ಸಮುದಾಯಭವನ ಯೋಜನೆಯು ಒಂದು ಆದರ್ಶ ನಮೂನೆಗೆ ಅನುರೂಪವಾಗಿ, ಸಾರ್ವಜನಿಕ ಸಭೆಗಳಿಗೆ ಮುಖ್ಯವಾಗಿ ಮದುವೆ ಕಾರ್ಯಗಳನ್ನು ನಿರ್ವಹಿಸಲು ಬೇಕಾಗುವ ಎಲ್ಲಾ ಸೌಕರ್ಯಗಳನ್ನು ಹೊಂದಿರಬೇಕು, ಅಂದರೆ ಅಂತಹ ಕಾರ್ಯಗಳಿಗೆ ಬೇಕಾಗಿರುವ ಸಾಕಷ್ಟು ಕೊಠಡಿಗಳು, ಶೌಚಾಲಯಗಳು, ಸ್ನಾನದ ಕೊಠಡಿಗಳು, ಲಾಕರುಗಳು, ಆದರ್ಶ ಪರಿಣಾಮದ ಅಡುಗೆ ಕೊಠಡಿಗಳು ಮತ್ತು ವಾಹನಗಳು ನಿಲ್ಲಿಸಲು ಸಾಕಷ್ಟು ಸ್ಥಳವನ್ನು (Parking Space) ಹೊಂದಿದ್ದು, ಕೊನೆಯ ಪಕ್ಷ 500 ಮಂದಿಗಳಿಗೆ ಸಾಕಾಗುವ ಹಾಲ್ ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ಮತ್ತು 200 ಮಂದಿಗಳಿಗೆ ಸಾಕಾಗುವ ಹಾಲ್‌ಗಳು ಇತರೆ ಕೇಂದ್ರಗಳಲ್ಲಿ ಇರತಕ್ಕದ್ದು.

5) ಶಾದಿಮಹಲ್/ಸಮುದಾಯಭವನಗಳನ್ನು ವಾಣಿಜ್ಯ ಮತ್ತು ವಾಣಿಜ್ಯೇತರ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳಬಹುದು. ವಾಣಿಜ್ಯೇತರ ಉದ್ದೇಶಕ್ಕೆ ಹಾಗೂ ಇತರೆ ಸಾಮಾಜಿಕ ಸಮಾರಂಭಗಳು ಸೇರಿ ಉಪಯೋಗಿಸಿಕೊಳ್ಳಬಹುದಾಗಿದೆ. ವಾಣಿಜ್ಯೇತರ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುವ ಸಮಾರಂಭಗಳಿಗೆ ಸಮಂಜಸವಾದ ಬಾಡಿಗೆಯನ್ನು ನಿಗಧಿಪಡಿಸಬೇಕಾಗಿದೆ. ಶಾದಿಮಹಲ್/ಸಮುದಾಯ ಭವನಗಳ ಆಡಳಿತ ಮಂಡಳಿಯು ಬಾಡಿಗೆ ನಿಗಧಿಪಡಿಸುವುದನ್ನು ಜಿಲ್ಲಾಧಿಕಾರಿಗಳಿಂದ ಕಡ್ಡಾಯವಾಗಿ ಅನುಮೋದಿಸಲ್ಪಡಿಸಿಕೊಳ್ಳತಕ್ಕದ್ದು, ಶಾದಿಮಹಲ್/ಸಮುದಾಯಭವನಗಳ ಬಾಡಿಗೆ ದರವನ್ನು ಪರಿಷ್ಕೃತಗೊಳಿಸಬೇಕಾದಲ್ಲಿಯೂ ಸಹ ಜಿಲ್ಲಾಧಿಕಾರಿಗಳ ಅನುಮೋದನೆ ಪಡೆಯತಕ್ಕದ್ದು.

6) ಈ ಕಾರ್ಯಕ್ರಮದಡಿಯಲ್ಲಿ ಅನುದಾನ ಪಡೆಯಲು ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರ ಸ್ವಯಂ ಸೇವಾ ಸಂಸ್ಥೆಗಳು ಮಾತ್ರ ಅರ್ಹವಿರುತ್ತದೆ.

7) ಅನುದಾನ ಪಡೆಯು ಸಂಸ್ಥೆಗಳು ರಾಜ್ಯದಲ್ಲಿ ಪಕ್ಷ ಮಂಡಳಿಯಿಂದ ನೊಂದಾಯಿತ ಸಂಸ್ಥೆಗಳಾಗಿರಬೇಕು. ನೊಂದಾಯಿತ ದಿನಾಂಕದಿಂದ ಈ ಸಂಸ್ಥೆಗಳು ಕನಿಷ್ಠ ಮೂರು ವರ್ಷಗಳಿಂದ ಪ್ರಚಲಿತವಾಗಿರಬೇಕು.

8) ಅನುದಾನ ಬಯಸುವ ಸ್ವಯಂಸೇವಾ ಸಂಸ್ಥೆಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ತಮ್ಮ ಹೆಸರಿನಲ್ಲಿ ಎಲ್ಲಾ ದಾಖಲೆಗಳನ್ನು ಹೊಂದಿರಬೇಕು.

9) ಅನುದಾನವನ್ನು ಜಿಲ್ಲೆ ಜಿಲ್ಲಾಧಿಕಾರಿಗಳ ಮೂಲಕ ಬಿಡುಗಡೆ ಮಾಡತಕ್ಕದ್ದು, ಜಿಲ್ಲಾಧಿಕಾರಿಗಳು ಅನುದಾನವನ್ನು ಸಂಸ್ಥೆಗಳಿಗೆ ಮರು ಬಿಡುಗಡೆ ಮಾಡುವ ಮುನ್ನ ಕಟ್ಟಡದ ಪ್ರಗತಿಯನ್ನು ಆಧರಿಸಿ ಬಿಡುಗಡೆ ಮಾಡತಕ್ಕದ್ದು,

10) ಸಮುದಾಯಭವನ/ಶಾದಿಮಹಲ್ ಕಟ್ಟಡ ಕಾಮಗಾರಿಯನ್ನು ಮೊದಲನೇ ಕಂತಿನ ಅನುದಾನ ಪಡೆದ ದಿನಾಂಕದಿಂದ ಎರಡು ವರ್ಷಗಳೊಳಗಾಗಿ ಪೂರ್ಣಗೊಳಿಸತಕ್ಕದ್ದು.

11) ಈ ರೀತಿ ನಿರ್ಮಿಸಲಾದ ಸಮುದಾಯಭವನ/ಶಾದಿಮಹಲ್‌ನ್ನು ರಾಜಕೀಯ ಚಟುವಟಿಕೆಗಳಿಗೆ ಉಪಯೋಗಿಸಬಾರದು.

12) ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಜಿಲ್ಲಾ ಅಧಿಕಾರಿಗಳಿಂದ ಬರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ತಮ್ಮ ಶಿಫಾರಸ್ಸಿನೊಂದಿಗೆ ಅನುಮೋದನೆ ಮತ್ತು ಹಣ ಬಿಡುಗಡೆಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**4(1)ಬಿ(v):–ಸಿಬ್ಬಂದಿ/ಅಧಿಕಾರಿಗಳು ಕರ್ತವ್ಯ ನಿರ್ವಹಣೆಯಲ್ಲಿ ಬಳಸುವ ನಿಯಮಗಳ, ಕಾಯಿದೆಗಳ ಮತ್ತು ಸೂಚನೆಗಳ ಕೈಪಿಡಿಗಳ ವಿವರ:**

1) 2005 ಕರ್ನಾಟಕ ಸರ್ಕಾರ ಸಚಿವಾಲಯದ ಪರಿಷ್ಕೃತ ಕೈಪಿಡಿ
2) ಮಾಹಿತಿ ಹಕ್ಕು ಅಧಿನಿಯಮ 2005
3) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958
4) ಕರ್ನಾಟಕ ಸಾದಿಲ್ವಾರು ವೆಚ್ಚದ ಕೈಪಿಡಿ, 1958
5) ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಗಳು 1977
6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ – 1999
7) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ (ತಿದ್ದುಪಡಿ) ಅಧಿನಿಯಮ–2001
8) ಆರ್ಥಿಕ ಇಲಾಖೆಯಿಂದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಆದೇಶಗಳು.
9) ಕರ್ನಾಟಕ ನ್ಯಾಯಾಂಗ ಅಧಿಕಾರಿಗಳ (ವೈದ್ಯಕೀಯ ಹಾಜರಾತಿ) ನಿಯಮಗಳು 2009
10) ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963
11) ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977
12) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು, 1966
13) ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ) ನಿಯಮಗಳು, 1957
14) ಕರ್ನಾಟಕ ಆರ್ಥಿಕ ಸಂಹಿತೆ, 1958
15) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ಆರ್ಥಿಕ ಇಲಾಖೆ ಹೊರಡಿಸಿರುವ ಆದೇಶ/ಸುತ್ತೋಲೆ
16) ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977
17) ನೋಟರಿ ಅಧಿನಿಯಮ ಮತ್ತು ನಿಯಮಗಳು
18) ದಿ ಕರ್ನಾಟಕ ಕಂಡಕ್ಟ್ ಆಫ್ ಗೌರ್ನಮೆಂಟ್ ಲಿಟಿಗೇಷನ್ ರೂಲ್ಸ್, 1985

19) ದಿ ವಕ್ಫ್ ಆಕ್ಟ್ 1995,

20) ಕರ್ನಾಟಕ ವಕ್ಫ್ ನಿಯಮಗಳು 1997,

21) ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ನಿಯಮ

22) ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದಿಂದ ಸೌಲಭ್ಯ ಪಡೆಯಲು ಇರುವ ಷರತ್ತು ಮತ್ತು ನಿಬಂಧನೆಗಳ ನಿಯಮ (ಸಂಖ್ಯೆ: RD 39 WGA 91)

23) ಕರ್ನಾಟಕ ವಕ್ಫ್ ಸಂಸ್ಥೆಗಳ ಅನುದಾನ ಸಂಹಿತೆ (No. RD 139 CWF 77, Dated: 23–08–1979)

24) ಹಜ್ ಸಮಿತಿ ಅಧಿನಿಯಮ 2002, (ಕೇಂದ್ರ ಕಾಯ್ದೆ)

25) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾಯ್ದೆ 1994

**4(1)ಬಿ(vi):– ನಿಯಂತ್ರಣದಲ್ಲಿರುವ ದಾಸ್ತವೇಜುಗಳ ಪ್ರವರ್ಗಗಳ ವಿವರ ಪಟ್ಟಿ:**

ಸಚಿವಾಲಯ ವಾಹಿನಿ ಮೇರೆಗೆ ಸಂಬಂಧಪಟ್ಟ ಶಾಖೆಗಳಲ್ಲಿ ಎಲ್ಲಾ ಕಡತಗಳು ಹಾಗೂ ಹಿಂದೆ ಮುಕ್ತಾಯಗೊಂಡಂತಹ ಪ್ರಮುಖ ಕಡತಗಳು ಲಭ್ಯವಿರುತ್ತದೆ.

**4(1)ಬಿ(vii):– ಕಾರ್ಯನೀತಿ ರಚನೆ ಅಥವಾ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವ ಯಾವುದೇ ವ್ಯವಸ್ಥೆ ವಿವರ:**

| ಕ್ರಮ ಸಂಖ್ಯೆ | ಮಂಡಳಿ/ನಿಗಮ/ಪರಿಷತ್ತು/ಸಮಿತಿ | ಕೆಳಕಾಣಿಸಿದ ಅಧಿಕಾರಿಗಳಲ್ಲಿ ಸಾರ್ವಜನಿಕರಿಗೆ ಸಮಾಲೋಚನೆಗೆ ಪ್ರಾತಿನಿಧ್ಯವಿರುತ್ತದೆ. |
|---|---|---|
| 1 | ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು | ಮುಖ್ಯಕಾರ್ಯನಿರ್ವಾಹಕಾಧಿಕಾರಿಗಳು, ಕನ್ನಿಂಗ್ ಹ್ಯಾಮ್ ರಸ್ತೆ, ಬೆಂಗಳೂರು ಇವರೊಂದಿಗೆ ಸಮುದಾಯದ ಉಲೇಮಾಗಳಿಗೆ ಸಮಾಲೋಚನೆಗೆ ಅವಕಾಶವಿರುತ್ತದೆ. |
| 2 | ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ | ವ್ಯವಸ್ಥಾಪಕ ನಿರ್ದೇಶಕರು<br>(KMDC), 12ನೇ ಮಹಡಿ,<br>ವಿ.ವಿ.ಗೋಪುರ, ಬೆಂಗಳೂರು |
| 3 | ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ | ನಿರ್ದೇಶಕರು,<br>20ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. |
| 4 | ಕರ್ನಾಟಕ ರಾಜ್ಯ ಹಜ್ ಸಮಿತಿ | ಕಾರ್ಯನಿರ್ವಾಹಕಾಧಿಕಾರಿಗಳು,<br>ಹಜ್ ಭವನ, ರಿಚ್‌ಮಂಡ್ ರಸ್ತೆ, ಬೆಂಗಳೂರು.<br>ಹಜ್ ಯಾತ್ರಿಗಳಿಗೆ ಸಂಬಂಧಿಸಿದಂತೆ ಸಮುದಾಯದ ಮುಖ್ಯಸ್ಥರು ಸಮಾಲೋಚಿಸಲು ಅವಕಾಶವಿರುತ್ತದೆ. |
| 5 | ಕರ್ನಾಟಕ ರಾಜ್ಯ ಉರ್ದು ಅಕಾಡೆಮಿ | ರಿಜಿಸ್ಟ್ರಾರ್, ಕನ್ನಡ ಭವನ, ಬೆಂಗಳೂರು ಇವರೊಂದಿಗೆ ಉರ್ದು ಭಾಷೆಯ ಸಾಹಿತಿಗಳು ಮತ್ತು ಭಾಷಾಭಿಮಾನಿಗಳು ಸಮಾಲೋಚನೆಗೆ ಅವಕಾಶವಿದೆ. |
| 6 | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ | ಸದಸ್ಯ ಕಾರ್ಯದರ್ಶಿ,<br>ವಿಕಾಸ ಸೌಧ, ಬೆಂಗಳೂರು. |
| 7 | ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತು | ಸದಸ್ಯ ಕಾರ್ಯದರ್ಶಿ,<br>ವಿಕಾಸ ಸೌಧ, ಬೆಂಗಳೂರು. |
| 8 | ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ | ಕಾರ್ಯದರ್ಶಿ,<br>5ನೇ ಮಹಡಿ, ವಿ.ವಿ. ಗೋಪುರ, ಬೆಂಗಳೂರು.<br>ಅಲ್ಪಸಂಖ್ಯಾತರ ಸಮುದಾಯಗಳ ಮುಖ್ಯಸ್ಥರು ಮತ್ತು ಎನ್.ಜಿ.ಓ.ಗಳಿಗೆ ಸಮಾಲೋಚನೆಗೆ ಅವಕಾಶವಿರುತ್ತದೆ. |

**4(1)ಬಿ(viii):– ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಅಥವಾ ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳ, ಪರಿಷತ್ತುಗಳ ಸಮಿತಿಗಳ ಮತ್ತು ಇತರ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತವಾಗಿರುತ್ತವೆಯೋ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತವೆಯೋ ಎಂಬುದರ ವಿವರ ಪಟ್ಟಿ:**

| ಕ್ರಮ ಸಂಖ್ಯೆ | ಮಂಡಳಿ/ನಿಗಮ/ಪರಿಷತ್ತು/ಸಮಿತಿ | ಸಭೆಯ ನಡವಳಿಗಳು ಕೆಳಕಾಣಿಸಿದ ಅಧಿಕಾರಿಗಳಲ್ಲಿ ಸಾರ್ವಜನಿಕರಿಗೆ ಲಭ್ಯವಾಗುತ್ತವೆ. |
|---|---|---|
| 1 | ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು | ಮುಖ್ಯಕಾರ್ಯನಿರ್ವಾಹಕಾಧಿಕಾರಿಗಳು,<br>ಕನ್ನಿಂಗ್ ಹ್ಯಾಮ್ ರಸ್ತೆ, ಬೆಂಗಳೂರು |

| ಕ್ರಮ ಸಂಖ್ಯೆ | ಮಂಡಳಿ/ನಿಗಮ/ಪರಿಷತ್ತು/ಸಮಿತಿ | ಸಭೆಯ ನಡವಳಿಗಳು ಕೆಳಕಾಣಿಸಿದ ಅಧಿಕಾರಿಗಳಲ್ಲಿ ಸಾರ್ವಜನಿಕರಿಗೆ ಲಭ್ಯವಾಗುತ್ತವೆ. |
|---|---|---|
| 2 | ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ | ವ್ಯವಸ್ಥಾಪಕ ನಿರ್ದೇಶಕರು (KMDC), 12ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು |
| 3 | ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ | ನಿರ್ದೇಶಕರು, 20ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. |
| 4 | ಕರ್ನಾಟಕ ರಾಜ್ಯ ಹಜ್ ಸಮಿತಿ | ಕಾರ್ಯನಿರ್ವಾಹಕಾಧಿಕಾರಿಗಳು, ಹಜ್ ಭವನ, ರಿಚ್‌ಮಂಡ್ ರಸ್ತೆ, ಬೆಂಗಳೂರು. |
| 5 | ಕರ್ನಾಟಕ ರಾಜ್ಯ ಉರ್ದು ಅಕಾಡೆಮಿ | ರಿಜಿಸ್ಟ್ರಾರ್, ಕನ್ನಡ ಭವನ |
| 6 | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ | ಸದಸ್ಯ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು. |
| 7 | ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತು | ಸದಸ್ಯ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು. |
| 8 | ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ | ಕಾರ್ಯದರ್ಶಿ, 5ನೇ ಮಹಡಿ, ವಿ.ವಿ. ಗೋಪುರ, ಬೆಂಗಳೂರು. |

**4(1) ಬಿ (ix) & (x):- ಉಪ ಕಾರ್ಯದರ್ಶಿ ಹಾಗೂ ಆಪ್ತ ಶಾಖೆಯ ನೌಕರರ ಮಾಹಿತಿ ಹಾಗೂ ಪಡೆಯುತ್ತಿರುವ ವೇತನ.**

| ಕ್ರಮ ಸಂಖ್ಯೆ | ಹುದ್ದೆ | ಹೆಸರು ಶ್ರೀ/ಶ್ರೀಮತಿ | ದೂರವಾಣಿ ಸಂಖ್ಯೆ | ಮಾಸಿಕ ವೇತನ |
|---|---|---|---|---|
| 1 | ಉಪ ಕಾರ್ಯದರ್ಶಿ | ಶ್ರೀಮತಿ ನಾಗರತ್ನ ಎಂ. | 22351139 | 64,047/– |
| 2 | ಶೀಘ್ರಲಿಪಿಗಾರರು | ಶ್ರೀಮತಿ ವೀಣಾಕುಮಾರಿ | 22034440 | 22,816/– |
| 3 | ಕಿರಿಯ ಸಹಾಯಕರು | ಶ್ರೀ ದೂದ್‌ಪೀರ್ ಹೆಚ್. ಮುಲ್ಲಾ | 22034440 | 18,268/– |
| 4 | ದಲಾಯತ್ | ಶ್ರೀ ವಿಷಕಂಠ | 22034477 | 20,950/– |

**4(1) ಬಿ (xi) :– ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸುವ ಪ್ರಸ್ತಾವಿತ ವೆಚ್ಚಗಳನ್ನು ಮತ್ತು ಮಾಡಲಾದ ಬಟವಾಡೆಗಳ ವರದಿಯನ್ನು ಸೂಚಿಸಿ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ.**

**ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಅಲ್ಪಸಂಖ್ಯಾತರ ನಿರ್ದೇಶನಾಲಯ, ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಕರ್ನಾಟಕ ರಾಜ್ಯ ಹಜ್ ಸಮಿತಿ, ಕರ್ನಾಟಕ ಉರ್ದು ಅಕಾಡೆಮಿ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ, ಕರ್ನಾಟಕ ರಾಜ್ಯ ವಕ್ಫ್ ಕೌನ್ಸಿಲ್, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಇವರಿಗೆ 2012–13ನೇ ಸಾಲಿನಲ್ಲಿ ವಿವಿಧ ಕಾರ್ಯಕ್ರಮಗಳಿಗಾಗಿ ಆಯವ್ಯಯದಲ್ಲಿ ರೂ. 32699.66 ಲಕ್ಷಗಳ್ನು ಒದಗಿಸಿದ್ದು, ಅದರ ವಿವರಗಳು ಈ ಕೆಳಕಂಡಂತಿದೆ.**

## ಅಲ್ಪಸಂಖ್ಯಾತರ ನಿರ್ದೇಶನಾಲಯ

### 2013–14ನೇ ಸಾಲಿನ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಕಾರ್ಯ ನಿರ್ವಹಣಾ ಪತ್ರ

**ಅಲ್ಪಸಂಖ್ಯಾತ ಇಲಾಖೆಯ ಮುಖ್ಯ ಉದ್ದೇಶ:–**

ಅಲ್ಪಸಂಖ್ಯಾತರನ್ನು ಸಾಮಾಜಿಕವಾಗಿ ಶೈಕ್ಷಣಿಕವಾಗಿ, ಆರ್ಥಿಕವಾಗಿ ಸಬಲೀಕರಿಸುವ ಸಲುವಾಗಿ ಹಾಘೂ ಸರ್ವೋತೋಮುಖ ಅಬಿವೃದ್ಧಿ ಕಾರ್ಯಕ್ರಮಗಳ ಅನುಷಾನಕ್ಕಗಿ ಅಲ್ಪಸಂಖ್ಯಾತರ ನಿರ್ದೇಶನಾಲಯ ಪ್ರತ್ಯೇಕವಾಗಿ ಅಸ್ತಿತ್ವಕ್ಕೆ ಬಂದಿದು, 1999–2000ನೇ ಸಾಲಿನಿಂದ ಕಾರ್ಯನಿರ್ವಹಿಸುತ್ತಿದ್ದು. ಈ ವರ್ಗದ ಅಭಿವೃದ್ಧಿಗಾಗಿ ಸರ್ಕಾರವು ವಿಶೇಷ ಗಮನ ನೀಡಿದ್ದು ಸಾಕ್ಷಿಯಾಗಿದೆ. ಪ್ರಸ್ತುತ ಈ ಇಲಾಖೆಯಿಂದ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಬಾಲಕ/ಬಾಲಕೀಯರ ವಿದ್ಯಾರ್ಥಿನಿಲಯಗಳು, ಮೆಟ್ರಿಕ್ ನಂತರದ ಬಾಲಕೀಯರ ವಿದ್ಯಾರ್ಥಿನಿಲಯಗಳ ನಿರ್ವಹಣೆ, ಅಲ್ಪಸಂಖ್ಯಾತರ ಸಂಸ್ಥೆಗಳಿಂದ ನಿರ್ಮಿಸಲ್ಪಡುವ ಶಾದಿಮಹಲ್/ಸಮುದಾಯಭವನ ನಿರ್ಮಾಣಕ್ಕೆ ಸಹಾಯಾನುದಾನ ನೀಡುವುದು, ಮುರಾರ್ಜಿ ದೇಸಾಯಿ ವಸತಿ ಶಾಲೆಗಳು, ಖಾಸಗಿ ವಿದ್ಯಾರ್ಥಿನಿಯಲಯಗಳ ವಿದ್ಯಾರ್ಥಿಗಳಿಗೆ ಭೋಜನ ವೆಚ್ಚಕ್ಕೆ ಅನುದಾನ ನೀಡಿಕೆ. ಅಲ್ಪಸಂಖ್ಯಾತರ ಹಾಸ್ಟೆಲ್ ಕಟ್ಟಡಗಳ ನಿರ್ಮಾಣ, ಕೌಶಲ್ಯ ಅಭಿವೃದ್ಧಿ ಯೋಜನೆ, ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಶಿಕ್ಷಣ ಕಲಿಕೆ ಸಾಧನಗಳು, ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ, ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ, ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಬೋಧನ ಶುಲ್ಕ, ಕಾರ್ಯನಿರತ ಮಹಿಳೆಯರಿಗೆ, ವಸತಿ ನಿಯಲ, ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ಕರ್ನಾಟಕ ವಕ್ಫ್ ಸಂಪತ್ತುಗಳ ರಕ್ಷಣೆ, ಪೇಶ್ ಇಮಾಮ್ ಮತ್ತು ಮೌಜನ್‌ಗಳಿಗೆ ಗೌರವಧನ, ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿ, ಬಿದಾಯಿ ಯೋಜನೆಗಳಿಗೆ ಜಿಲ್ಲಾ ಕೇಂದ್ರಗಳಲ್ಲಿ ಅರಿವು ಮೂಡಿಸುವ ಮಾಹಿತಿ ಕೇಂದ್ರ, ಪ್ರಸ್ತಾವನೆ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ ನೀಡಿಕೆ, ಐಟಿಐ /ಡಿಪ್ಲೋಮ ವಿದ್ಯಾರ್ಥಿಗಳಿಗೆ ಸ್ಟೈಪೆಂಡ್ ಮುಂತಾದ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದೆ.

ಕೇಂದ್ರ ಸರ್ಕಾರದ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರ ವಿದ್ಯಾರ್ಥಿ ವೇತನ ನೀಡಿಕೆ, ಮೆಟ್ರಿಕ್ –ಕಂ–ಮೀನ್ಸ್ ವಿದ್ಯಾರ್ಥಿವೇತನ ನೀಡಿಕೆ, ಅಲ್ಪಸಂಖ್ಯಾತರಿಗಾಗಿ ಬಹುವಲಯವಾರು ಅಭಿವೃದ್ಧಿ ಯೋಜನೆ (ಎಂ.ಎಸ್.ಡಿ.ಪಿ) ಹಾಗೂ ಫ್ರೀ ಕೋಚಿಂಗ್ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ರಾಜ್ಯ ಸರ್ಕಾರವು 2013–14 ನೇ ಸಾಲಿಗೆ 483.64 ಕೋಟಿಗಳನ್ನು ಒದಗಿಸಿದೆ.

**ಆಡಳಿತ ವ್ಯವಸ್ಥೆ:–**

ಅಲ್ಪಸಂಖ್ಯಾತರ ಇಲಾಖೆಗೆ ಒಬ್ಬರು ನಿರ್ದೇಶಕರಿದ್ದು, ಒಬ್ಬರು ಜಂಟಿ ನಿರ್ದೇಶಕರು ಹಾಗೂ ಒಬ್ಬರು ಸಹಾಯಕ ನಿರ್ದೇಶಕರು ಕೇಂದ್ರ ಕಛೇರಿಯಲ್ಲಿ ನಿರ್ದೇಶಕರಿಗೆ ಸಹಾಯಕ ಅಧಿಕಾರಿಗಳಾಗಿರುತ್ತಾರೆ. ಅದಕ್ಕೆ ಸಿಬ್ಬಂದಿ ವರ್ಗದವರು ನಿರ್ದೇಶಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಜಿಲ್ಲಾ ಮಟ್ಟದಲ್ಲಿ ಅಲ್ಪಸಂಖ್ಯಾತರ ಇಲಾಖೆಯ ಕಾರ್ಯಕ್ರಮಗಳನ್ನು ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳು ಅನುಷ್ಠಾನಗೊಳಿಸುತ್ತಿದ್ದಾರೆ. ಜಿಲ್ಲಾ ಮಟ್ಟದಲ್ಲಿ ಈ ಕಾರ್ಯಕ್ರಮಗಳನ್ನು ಜಿಲ್ಲಾಧಿಕಾರಿಗಳು/ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಜಿಲ್ಲಾ ಪಂಚಾಯತ್ ನಿಯಂತ್ರಣದಲ್ಲಿ ಜಾರಿಗೊಳಿಸಲಾಗುತ್ತಿದೆ. ಈ ಇಲಖೆಯಲ್ಲಿ ತಾಲ್ಲೂಕು ಮಟ್ಟದ ಅಧಿಕಾರಿಗಳು ಇರುವುದಿಲ್ಲ. ಅಲ್ಪಸಂಖ್ಯಾತರ ಕಾರ್ಯಕ್ರಮಗಳ ವಿಷಯ ನಿರ್ವಹಣೆಗಾಗಿ ಒಂದು ಪ್ರ.ದ.ಸ., ಒಂದು ದ್ವಿ.ದ.ಸ/ ಬೆರಚ್ಚುಗಾರರು ಹುದ್ದೆಗಳನ್ನು ಪ್ರತಿ ಜಿಲ್ಲೆಗೆ ಮಂಜೂರು ಮಾಡಲಾಗಿದೆ. 23 ಜಿಲ್ಲೆಗಳಲ್ಲಿ ಜಿಲ್ಲಾ ಅಧಿಕಾರಿಗಳ ಕಛೇರಿ ಮಂಜೂರಾಗಿದ್ದು, 14 ಜಿಲ್ಲೆಗಳಲ್ಲಿ ಅಲ್ಪಸಂಖ್ಯಾತರ ಜಿಲ್ಲಾ ಕಚಿಜಚಿಟ ಪ್ರಾರಂಭಿಸಿದ್ದು ಕಾರ್ಯನಿರ್ವಹಿಸುತ್ತಿದೆ.

**ಭಾಗ–2**

2013–14ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ಇಲಾಖೆಯ ಕಾರ್ಯಕ್ರಮಗಳಿಗಾಗಿ ಆಯವ್ಯಯದಲ್ಲಿ ರೂ. 483.64 ಕೋಟಿಗಳನ್ನು ಒದಗಿಸಲಾಗಿದ್ದು ರೂ. 441.57 ಕೋಟಿ ಬಿಡುಗಡೆ ಮಾಡಲಾಗಿದ್ದು, ಮಾರ್ಚ್–2014 ರ ಅಂತ್ಯಕ್ಕೆ ರೂ.409.21 ಕೋಟಿ ಖರ್ಚು ಮಾಡಲಾಗಿದ್ದು ಒಟ್ಟಾರೆ 92.67% ರಷ್ಟು ಪ್ರಗತಿ ಸಾಧಿಸಲಾಗಿದೆ.

**ಅಲ್ಪಸಂಖ್ಯಾತರ ಇಲಾಖೆಗೆ 2013–14ನೇ ಸಾಲಿನಲ್ಲಿ ಒದಗಿಸಿದ ಆಯವ್ಯಯ ಮತ್ತು ವೆಚ್ಚ ಮಾಡಿದ ಅನುದಾನದ ವಿವರ**

**ಅಲ್ಪಸಂಖ್ಯಾತರ ಇಲಾಖೆಗೆ 2013–14ನೇ ಸಾಲಿನಲ್ಲಿ ಒದಗಿಸಿದ ಆಯವ್ಯಯ ಮತ್ತು ಮಾರ್ಚ್–2014ರವರೆಗೆ ವೆಚ್ಚ ಮಾಡಿದ ಅನುದಾನದ ವಿವರ.**

**ರಾಜ್ಯವಲಯ ಕಾರ್ಯಕ್ರಮ:–** **(ರೂ.ಲಕ್ಷಗಳಲ್ಲಿ)**

| ಕ್ರ. ಸ. | ಕಾರ್ಯಕ್ರಮಗಳ ವಿವರ | ಒದಗಿಸಿದ ಆಯವ್ಯಯ | ಬಿಡುಗಡೆ ಯಾದ ಅನುದಾನ | ವೆಚ್ಚ ಮಾರ್ಚ್ 2014ರ ಅಂತ್ಯಕ್ಕೆ | ಭೌತಿಕ ಸಾಧನೆ |
|---|---|---|---|---|---|
| 1 | ನಿರ್ದೇಶನಾಲಯ ಮತ್ತು ಆಡಳಿತ 2225–03–001–0–03 | 457.69 | 457.69 | 398.07 | ಅಧಿಕಾರಿಗಳ/ಸಿಬ್ಬಂದಿ ವೇತನ/ ಇತರೆ ವೆಚ್ಚ |
| 2 | ಅಲ್ಪಸಂಖ್ಯಾತರಿಗಾಗಿ ಸಮುದಾಯ ಭವನ/ಶಾದಿಮಹಲ್‌ಗಳ ನಿರ್ಮಾಣ 2225–03–277–2–48 | 2500.00 | 2500.00 | 1911.75 | 120 ಸಂಸ್ಥೆಗಳು |
| 3 | ಅಲ್ಪಸಂಖ್ಯಾತರಿಗಾಗಿ ಕೌಶಲ್ಯ ಅಭಿವೃದ್ಧಿ ಯೋಜನೆ 2225–03–277–2–58 | 700.00 | 700.00 | 700.00 | 6164 ಅಭ್ಯರ್ಥಿಗಳು |
| 4 | ಸರ್ಕಾರಿ ಅಲ್ಪಸಂಖ್ಯಾತರ ಶಾಲೆ/ವಸತಿ ನಿಲಯಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು 2225–03–277–2–59 | 25.00 | 25.00 | 25.00 | 250 ಶಾಲೆಗಳು/ ವಸತಿ ನಿಲಯಗಳು |
| 5 | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ 2225–03–277–2–61–051 | 800.00 | 800.00 | 800.00 | 20650 ವಿದ್ಯಾರ್ಥಿಗಳು |
| 6 | ಹೊಸ ಮೊರಾರ್ಜಿದೇಸಾಯಿ ನಿವಾಸಿ ಶಾಲೆಗಳು 2225–03–277–2–63 | 600.00 | 600.00 | 600.00 | 237 ವಿದ್ಯಾರ್ಥಿಗಳು |

<table>
<tr><th>ಕ್ರ.<br>ಸ.</th><th>ಕಾರ್ಯಕ್ರಮಗಳ ವಿವರ</th><th>ಒದಗಿಸಿದ<br>ಆಯವ್ಯಯ</th><th>ಬಿಡುಗಡೆ<br>ಯಾದ<br>ಅನುದಾನ</th><th>ವೆಚ್ಚ<br>ಮಾರ್ಚ್<br>2014ರ<br>ಅಂತ್ಯಕ್ಕೆ</th><th>ಭೌತಿಕ<br>ಸಾಧನೆ</th></tr>
<tr><td>7</td><td>ಅಲ್ಪಸಂಖ್ಯಾತರಿಗಾಗಿ ನೂತನ ಹಾಸ್ಟೆಲ್‌ಗಳ ಪ್ರಾರಂಭ<br>2225–03–277–2–64</td><td>530.34</td><td>530.34</td><td>530.34</td><td>36 ವಿದ್ಯಾರ್ಥಿನಿಲಯಗಳ ನಿರ್ವಹಣೆಗೆ.</td></tr>
<tr><td>8</td><td>ಮೊರಾರ್ಜಿದೇಸಾಯಿ ವಸತಿ ಶಾಲೆಗಳು ಜಿಲ್ಲಾ ಪಂಚಾಯಿತಿಯಿಂದ ವರ್ಗಾವಣೆಗೊಂಡ ಶಾಲೆಗಳ ನಿರ್ವಹಣೆ<br>2225–03–277–2–78</td><td>435.50</td><td>435.50</td><td>435.50</td><td>980 ವಿದ್ಯಾರ್ಥಿಗಳು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ರವರಿಗೆ ಬಿಡುಗಡೆ ಮಾಡಿದೆ.</td></tr>
<tr><td>9</td><td>ಮೊರಾರ್ಜಿದೇಸಾಯಿ ವಸತಿ ಶಾಲೆಗಳು ಜಿಲ್ಲಾ ಪಂಚಾಯಿತಿಯಿಂದ ವರ್ಗಾವಣೆಗೊಂಡ ಶಾಲೆಗಳ ನಿರ್ವಹಣೆ<br>2225–03–277–2–80</td><td>2400.00</td><td>2400.00</td><td>2400.00</td><td>9833 ವಿದ್ಯಾರ್ಥಿಗಳು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರವರಿಗೆ ಬಿಡುಗಡೆ ಮಾಡಿದೆ.</td></tr>
<tr><td>10</td><td>ಜೈನ್ ಸಮುದಾಯದ ವಿದ್ಯಾರ್ಥಿವೇತನ<br>2225–03–277–2–82 (117)</td><td>1000.00</td><td>1000.00</td><td>1000.00</td><td>56730 ವಿದ್ಯಾರ್ಥಿಗಳು</td></tr>
<tr><td>11</td><td>ಅಲ್ಪಸಂಖ್ಯಾತರಿಗಾಗಿ ಹುಡ್ಕೋ ಸಾಲಗಳು<br>2225–03–277–3–02</td><td>14.78</td><td>14.78</td><td>14.78</td><td>3 ಕಟ್ಟಡಗಳು, ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರವರಿಗೆ ಬಿಡುಗಡೆ ಮಾಡಿದೆ.</td></tr>
<tr><td rowspan="2">12</td><td rowspan="2">ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ<br>2225–03–277–3–05</td><td rowspan="2">100.00</td><td rowspan="2">100.00</td><td>150.00</td><td>93 UPSC, 2580 ಸಿ.ಇ.ಟಿ. ಫ್ರೀ ಕೋಚಿಂಗ್ ವಿದ್ಯಾರ್ಥಿಗಳಿಗೆ ತರಬೇತಿ</td></tr>
<tr><td colspan="2">ಶಾದಿಮಹಲ್/ ಸಮುದಾಯ ಭವನ ಯೋಜನೆಯಿಂದ ರೂ.50 ಲಕ್ಷ ಪುನರ್ ವಿನಿಯೋಗಿಸಲಾಗಿದೆ.</td></tr>
<tr><td>13</td><td>ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕ<br>2225–03–277–3–06</td><td>675.00</td><td>675.00</td><td>675.00</td><td>22 ಜಿಲ್ಲೆಗಳ 1435 ಕೇಂದ್ರಗಳು, 44416 ವಿದ್ಯಾರ್ಥಿಗಳು</td></tr>
<tr><td>14</td><td>ಅಲ್ಪಸಂಖ್ಯಾತರಿಗಾಗಿ ದುಡಿಯುವ ಮಹಿಳೆಯರ ವಸತಿ<br>2225–03–277–3–07</td><td>50.00</td><td>50.00</td><td>20.00</td><td>ಉರ್ದು ಅಕಾಡೆಮಿಗೆ ರೂ.20 ಲಕ್ಷ ಪುನರ್ ವಿನಿಯೋಗಿಸಲಾಗಿದೆ.</td></tr>
<tr><td>15</td><td>ಅಲ್ಪಸಂಖ್ಯಾತರಿಗಾಗಿ ಹಾಸ್ಟಲ್ ಕಟ್ಟಡಗಳ ನಿರ್ಮಾಣ (ವಿಶೇಷ ಅಭಿವೃದ್ಧಿ ಯೋಜನೆ)<br>4225–03–277–2–03</td><td>5000.00</td><td>5000.00</td><td>5000.00</td><td>70 ಕಟ್ಟಡಗಳ ನಿರ್ಮಾಣ,<br>4 ನಿವೇಶನ ಖರೀದಿ,<br>16 ಕಾಮಗಾರಿಗೆ ವೆಚ್ಚ ಮಾಡಿದೆ.</td></tr>
<tr><td>16</td><td>ಅಲ್ಪಸಂಖ್ಯಾತರಿಗಾಗಿ ಹುಡ್ಕೋ ಸಾಲಗಳು<br>ಅ) ಸಾಲ ಮೇಲುಸ್ತುವಾರಿ<br>4225–03–277–2–05</td><td>41.62</td><td>41.62</td><td>41.62</td><td>3 ಕಟ್ಟಡಗಳು, ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರವರಿಗೆ ಬಿಡುಗಡೆ</td></tr>
</table>

| ಕ್ರ. ಸ. | ಕಾರ್ಯಕ್ರಮಗಳ ವಿವರ | ಒದಗಿಸಿದ ಆಯವ್ಯಯ | ಬಿಡುಗಡೆ ಯಾದ ಅನುದಾನ | ವೆಚ್ಚ ಮಾರ್ಚ್ 2014ರ ಅಂತ್ಯಕ್ಕೆ | ಭೌತಿಕ ಸಾಧನೆ |
|---|---|---|---|---|---|
| | ಆ) ಮೊರಾರ್ಜಿದೇಸಾಯಿ ವಸತಿ ಶಾಲೆಗಳ ನಿರ್ಮಾಣ 4225–03–277–2–05 | 2500.00 | 2500.00 | 2500.00 | 15 ಕಟ್ಟಡಗಳ ನಿರ್ಮಾಣ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರವರಿಗೆ ಬಿಡುಗಡೆ |
| 17 | ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ 2225–03–277–2–75 | 300.00 | 300.00 | 298.20 | (ನವೀಕರಣ–13, ಹೊಸ–47) ಒಟ್ಟು 60 ಅಭ್ಯರ್ಥಿಗಳು |
| 18 | ಕರ್ನಾಟಕದಲ್ಲಿ ವಕ್ಫ್ ಸಂಪತ್ತಿನ ರಕ್ಷಣೆ 2225–03–102–0–13 (059) | 400.00 | 400.00 | 400.000 | ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳು, ಕರ್ನಾಟಕ ವಕ್ಫ್ ಬೋರ್ಡ್ ರವರಿಗೆ ಬಿಡುಗಡೆ |
| 19 | ವಕ್ಫ್ ಸಂಸ್ಥೆಗಳ ಮುಝಾವನ್‌ಗಳ ಪೇಷ್ ಇಮಾಮ್‌ಗಳಿಗೆ ಗೌರವಧನ 2225–03–277–3–08 | 200.00 | 200.00 | 200.00 | ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳು, ಕರ್ನಾಟಕ ವಕ್ಫ್ ಬೋರ್ಡ್ ರವರಿಗೆ ಬಿಡುಗಡೆ |
| 20 | ಕ್ರೈಸ್ ಸಮುದಾಯದ ಅಭಿವೃದ್ಧಿ 2225–03–102–0–14 | 6000.00 | 6000.00 | 3403.21 | ಚರ್ಚ್ 134 ಸಮುದಾಯ ಭವನ–30, ಅನಾಥಾಲಯ–4, ಕೌಶಲ್ಯ–2152, ಉತ್ತೇಜನ–17900, ಬಿದಾಯಿ–92, ಒಟ್ಟು–20312 ಫಲಾನುಭವಿಗಳು |
| **ಹೊಸ ಯೋಜನೆಗಳು** | | | | | |
| 21 | ಅರಿವು ಮೂಡಿಸುವ ಮಾಹಿತಿ ಕೇಂದ್ರ 2250–00–102–5–02 (059) | 1000.00 | 800.00 | 800.00 | 30 ಜಿಲ್ಲೆಗಳಿಗೆ ಮತ್ತು ಕೇಂದ್ರ ಸ್ಥಾನಕ್ಕೆ ಅನುದಾನ ಬಿಡುಗಡೆ |
| 22 | ಬಿದಾಯಿ ಯೋಜನೆ 2225–03–800–0–07 (059) | 1000.00 | 1000.00 | 1000.00 | 2000 ಹೆಣ್ಣು ಮಕ್ಕಳು |
| | **ಒಟ್ಟು** | **26729.93** | **26529.93** | **23303.47** | **87.84%** |

**ಜಿಲ್ಲಾವಲಯ ಕಾರ್ಯಕ್ರಮ:–**

(ರೂ. ಲಕ್ಷಗಳಲ್ಲಿ)

| ಕ್ರ. ಸ. | ಕಾರ್ಯಕ್ರಮಗಳ ವಿವರ | ಒದಗಿಸಿದ ಆಯವ್ಯಯ | ಬಿಡುಗಡೆ ಯಾದ ಅನುದಾನ | ವೆಚ್ಚ ಮಾರ್ಚ್ 2014ರ ಅಂತ್ಯಕ್ಕೆ | ಭೌತಿಕ ಸಾಧನೆ |
|---|---|---|---|---|---|
| 23 | ಅಲ್ಪಸಂಖ್ಯಾತರಿಗಾಗಿ ತರಬೇತಿ (ಕಾನೂನು ಪದವಿಧರರಿಗೆ ಶಿಷ್ಯವೇತನ) 2225–00–103–0–44 | 33.59 | 33.50 | 32.50 | 200 ಅಭ್ಯರ್ಥಿಗಳು |
| 24 | ಅಲ್ಪಸಂಖ್ಯಾತರಿಗಾಗಿ ಹಾಸ್ಟೆಲ್‌ಗಳು (ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಹಾಸ್ಟೆಲ್‌ಗಳು) 2225–00–103–0–34 | 1539.18 | 1539.18 | 1538.75 | 6280 ವಿದ್ಯಾರ್ಥಿಗಳು |

| | | | | | |
|---|---|---|---|---|---|
| 25 | ಅಲ್ಪಸಂಖ್ಯಾತರ ಐಟಿಐ/ಡಿಪ್ಲೋಮಾ ವಿದ್ಯಾರ್ಥಿಗಳಿಗೆ ಶಿಷ್ಯವೇತನ 2225–00–103–0–84 | 40.03 | 40.00 | 38.90 | 3422 ವಿದ್ಯಾರ್ಥಿಗಳು |
| 26 | ಅಲ್ಪಸಂಖ್ಯಾತರಿಗಾಗಿ ಶಿಷ್ಯವೇತನ 2225–00–103–0–55 | 7.50 | 7.50 | 7.25 | 580 ವಿದ್ಯಾರ್ಥಿಗಳು |
| 27 | ಅಲ್ಪಸಂಖ್ಯಾತರ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ ವಿದ್ಯಾರ್ಥಿನಿಲಯಗಳು 2225–00–103–0–50 | 78.00 | 75.50 | 75.10 | 1450 ವಿದ್ಯಾರ್ಥಿಗಳು |
| 28 | ಅಲ್ಪಸಂಖ್ಯಾತರಿಗಾಗಿ ವೃತ್ತಿ ತರಬೇತಿ 2225–00–103–0–54 | 31.99 | 28.00 | 27.75 | 450 ವಿದ್ಯಾರ್ಥಿಗಳು |
| 29 | ಅಲ್ಪಸಂಖ್ಯಾತರಿಗಾಗಿ ಅನಾಥಾಲಯಗಳು 2225–00–103–0–49 | 80.00 | 80.00 | 78.30 | 2425 ಅಭ್ಯರ್ಥಿಗಳು |
| 30 | ಕಾರ್ಯಕಾರಿ ಸಿಬ್ಬಂದಿ 2225–00–103–0–51 | 163.94 | 163.94 | 159.25 | ಅಧಿಕಾರಿಗಳ/ಸಿಬ್ಬಂದಿ ವೇತನ/ ಇತರೆ ವೆಚ್ಚ |
| | **ಒಟ್ಟು ರೂ.** | **1974.23** | **1967.62** | **1957.80** | **99.50%** |

**ಕೇಂದ್ರ ಸರ್ಕಾರದ ಕಾರ್ಯಕ್ರಮಗಳು**

(ರೂ. ಲಕ್ಷಗಳಲ್ಲಿ)

| ಕ್ರ. ಸ. | ಕಾರ್ಯಕ್ರಮಗಳ ವಿವರ | ಒದಗಿಸಿದ ಆಯವ್ಯಯ | ಬಿಡುಗಡೆಯಾದ ಅನುದಾನ | ವೆಚ್ಚ ಮಾರ್ಚ್ 2014ರ ಅಂತ್ಯಕ್ಕೆ | ಭೌತಿಕ ಸಾಧನೆ |
|---|---|---|---|---|---|
| 31 | ಮೆರಿಟ್ ಕಂ ಮೀನ್ಸ್ ವಿದ್ಯಾರ್ಥಿವೇತನ 2225–03–277–2–66 | 2300.00 | 2300.00 | 2300.00 | 8461 ವಿದ್ಯಾರ್ಥಿಗಳು |
| 32 | ಅಲ್ಪಸಂಖ್ಯಾತರಿಗಾಗಿ ಬಹುವಲಯವಾರು ಅಭಿವೃದ್ಧಿ ಯೋಜನೆ 2225–03–277–2–67 | 4000.00 | ಸರ್ಕಾರದಿಂದ ಅನುದಾನ ಬಿಡುಗಡೆಯಾಗಿರುವುದಿಲ್ಲ | | |
| 33 | ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ 2225–03–277–2–68 | 10260.00 | 10260.00 | 10260.00 | 737351 ವಿದ್ಯಾರ್ಥಿಗಳು |
| 34 | ಮೆಟ್ರಿಕ್ ನಂತರ ವಿದ್ಯಾರ್ಥಿವೇತನ 2225–03–277–2–69 | 3100.00 | 3100.00 | 3100.00 | 65780 ವಿದ್ಯಾರ್ಥಿಗಳು |
| | **ಒಟ್ಟು** | **19660.00** | **15660.00** | **15660.00** | **100%** |

**ಘೋಷ್ವಾರೆ:–**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾರ್ಯಕ್ರಮಗಳ ವಿವರ | ಒದಗಿಸಿದ ಆಯವ್ಯಯ | ಬಿಡುಗಡೆಯಾದ ಅನುದಾನ | ವೆಚ್ಚ ಮಾರ್ಚ್ 2014ರ ವರೆಗೆ | ಶೇಕಡಾವಾರು |
|---|---|---|---|---|---|
| 1 | ರಾಜ್ಯವಲಯ | 26729.93 | 26529.93 | 23303.47 | 87.84% |
| 2 | ಜಿಲ್ಲಾವಲಯ | 1974.23 | 1967.62 | 1957.80 | 99.50% |
| 3 | ಕೇಂದ್ರ ಪುರಸ್ಕೃತ | 19660.00 | 15660.00 | 15660.00 | 100% |
| | **ಒಟ್ಟು** | **48364.16** | **44157.55** | **40921.27** | **92.67%** |

## ಅಲ್ಪಸಂಖ್ಯಾತರ ನಿರ್ದೇಶನಾಲಯ

**I. ರಾಜ್ಯವಲಯ ಕಾರ್ಯಕ್ರಮಗಳು:**

**1) 1) ನಿರ್ದೇಶನಾಲಯದ ಆಡಳಿತ:**

2013–14ನೇ ಸಾಲಿಗೆ ಅಧಿಕಾರಿಗಳು/ಸಿಬ್ಬಂದಿವೇತನ, ಕಛೇರಿಯ ಇತರೆ ವೆಚ್ಚಗಳು ಹಾಗೂ ದರ್ಗಾಗಳ ಅಭಿವೃದ್ಧಿಗೆ ಒಟ್ಟು ರೂ. 457.69 ಲಕ್ಷ ಆಯವ್ಯಯವನ್ನು ಒದಗಿಸಿದ್ದು, ರೂ. 457.69 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 398.07 ಲಕ್ಷ ವೆಚ್ಚ ಮಾಡಲಾಗಿದೆ.

**2) ಅಲ್ಪಸಂಖ್ಯಾತರಿಗೆ ಸಮುದಾಯ ಭವನ/ ಶಾದಿಮಹಲ್ ನಿರ್ಮಾಣ**

ಅಲ್ಪಸಂಖ್ಯಾತರ ಜನಾಂಗದವರು ಸಾಂಸ್ಕೃತಿಕ ಕಾರ್ಯಕ್ರಮಗಳು, ಮದುವೆ ಇತ್ಯಾದಿಗಳನ್ನು ನಡೆಸಲು ಅನುಕೂಲವಾಗುವಂತೆ, ಸಮುದಾಯ ಭವನ/ಶಾದಿಮಹಲ್ ನಿರ್ಮಿಸಲು ಗರಿಷ್ಠ ಮಿತಿ ಜಿಲ್ಲಾ ಕೇಂದ್ರದಲ್ಲಿ ರೂ. 100.00 ಲಕ್ಷಗಳಿಗೆ ಮೀರದಂತೆ ಮತ್ತು ಇತರೆ ಸ್ಥಳಗಳಲ್ಲಿ ರೂ. 50.00 ಲಕ್ಷಕ್ಕೆ ಮೀರದಂತೆ ಅನುದಾನ ಮಂಜೂರು ಮಾಡಲಾಗುವುದು.

2013–14ನೇ ಸಾಲಿಗೆ ರೂ. 2500.00 ಲಕ್ಷ ಒದಗಿಸಲಾಗಿದ್ದು ರೂ. 2500.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 1911.75 ಲಕ್ಷ ವೆಚ್ಚ ಮಾಡಲಾಗಿದೆ. 120 ಸಂಸ್ಥೆಗಳು ಇದರ ಪ್ರಯೋಜನ ಪಡೆದಿವೆ.

**3) ಅಲ್ಪಸಂಖ್ಯಾತರಿಗಾಗಿ ಕೌಶಲ್ಯ ಅಭಿವೃದ್ಧಿ:–**

ಅಲ್ಪಸಂಖ್ಯಾತರ ಯುವಕ/ಯುವತಿಯರಿಗೆ ನಿರುದ್ಯೋಗ ನಿವಾರಣೆ ಮತ್ತು ಆರ್ಥಿಕ ಸ್ವಾವಲಂಭನೆಯನ್ನು ಸಭಲಪಡಿಸುವ ಉದ್ದೇಶದಿಂದ ನರ್ಸಿಂಗ್ ತರಬೇತಿ, ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ಇಸಿಐಎಲ್–ಇಸಿಐಟಿ ಸಂಸ್ಥೆರವರಿಂದ ವಿವಿಧ ಕಂಪ್ಯೂಟರ್ ತರಬೇತಿಗಳನ್ನು ನೀಡಲಾಗುತ್ತಿದೆ. ಎಸಿಸಿಪಿಎಲ್ ಸಂಸ್ಥೆಯಿಂದ ಬಿ.ಪಿ.ಓ ಕಾಲೆಸೆಂಟರ್, ಅನಿಮೇಷನ್ ಕೋರ್ಸ್‌ಗಳಲ್ಲಿ ತರಬೇತಿ ನೀಡಲಾಗುತ್ತಿದೆ.

2013–14ನೇ ಸಾಲಿಗೆ ರೂ. 700.00 ಲಕ್ಷ ಒದಗಿಸಿದ್ದು, ರೂ. 700.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ.700.00 ಲಕ್ಷ ವೆಚ್ಚ ಮಾಡಲಾಗಿದೆ. 6164 ಅಭ್ಯರ್ಥಿಗಳು ಇದರ ಪ್ರಯೋಜನ ಪಡೆದಿರುವರು.

4) **ಸರ್ಕಾರಿ ಅಲ್ಪಸಂಖ್ಯಾತರ ಶಾಲೆ/ವಸತಿ ನಿಲಯಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು:**

ಸರ್ಕಾರದಿಂದ ಮಾನ್ಯತೆ ಪಡೆದ ಅಲ್ಪಸಂಖ್ಯಾತ ಶಾಲೆಗಳ ಕಲಿಕೆ ಗುಣಮಟ್ಟ ಹೆಚ್ಚಿಸಲು ಹಾಗೂ ಕಲಿಕೆಗೆ ಸಂಬಂಧಪಟ್ಟ ಸಾಮಾಗ್ರಿಗಳನ್ನು ಒದಗಿಸಲು ಮತ್ತು ಭೋದಕರ ಭೋಧನಾ ಸಾಮರ್ಥ್ಯವನ್ನು ಭೋಧನಾ ಪರಿಕರ ಮೂಲಕ ಹೆಚ್ಚಿಸಿ ಅಲ್ಪಸಂಖ್ಯಾತರ ಮಕ್ಕಳನ್ನು ಉತ್ತಮ ಶಿಕ್ಷಣ ಪಡೆಯುವುದರಲ್ಲಿ ನೆರವಾಗಲು ಸರ್ಕಾರದಿಂದ ಮಾನ್ಯತೆ ಪಡೆದ ಅಲ್ಪಸಂಖ್ಯಾತರ ಪ್ರತಿ ಶಿಕ್ಷಣ ಸಂಸ್ಥೆಗೆ ರೂ. 10,000/– ಗಳಂತೆ ಅನುದಾನ ನೀಡಲಾಗುವುದು.

2013–14ನೇ ಸಾಲಿನಲ್ಲಿ ರೂ. 25.00 ಲಕ್ಷ ಒದಗಿಸಿದ್ದು, ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು 250 ಶಾಲೆ/ವಸತಿ ನಿಲಯಗಳಿಗೆ ವೆಚ್ಚ ಮಾಡಲಾಗಿದೆ.

**5) ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ:–**

ಪ್ರತಿ ಜಿಲ್ಲೆಯ ಅಲ್ಪಸಂಖ್ಯಾತ ಸಮುದಾಯದ ಗುಂಪಿಗೆ ಸೇರಿದ ಎಸ್‌ಎಸ್‌ಎಲ್‌ಸಿ/ಪಿಯುಸಿ/ಪದವಿ ತರಗತಿಗಳ ಅಂತಿಮ ವರ್ಷದಲ್ಲಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ.3000/– ರೂ.4000/– ರೂ.5000/– ಗಳ ಉತ್ತೇಜನ ನೀಡುವ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ.

2013–14ನೇ ಸಾಲಿಗೆ 800.00 ಲಕ್ಷ ಒದಗಿಸಿದ್ದು, ರೂ. 800.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 800.00 ಲಕ್ಷ ವೆಚ್ಚ ಮಾಡಲಾಗಿದ್ದು. 20650 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**6) ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು:**

ಪ್ರಸ್ತುತ ಸಾಲಿನಲ್ಲಿ 2 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಮಂಜೂರಾಗಿದ್ದು ಇವುಗಳ ನಿರ್ವಹಣೆಗೆ 2013–14ನೇ ಸಾಲಿನಲ್ಲಿ 600.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 600.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 600.00 ಲಕ್ಷ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ರವರಿಗೆ ಬಿಡುಗಡೆ ಮಾಡಲಾಗಿದೆ.

**7) ಅಲ್ಪಸಂಖ್ಯಾತರಿಗಾಗಿ ನೂತನ ಹಾಸ್ಟಲ್‌ಗಳ ಪ್ರಾರಂಭ:–**

2013–14ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಎಂ.ಎಸ್.ಡಿ.ಪಿ ಯೋಜನೆಯಡಿ 36 ಹೊಸ ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ರೂ. 530.34 ಲಕ್ಷ ಆಯವ್ಯಯ ಒದಗಿಸಲಾಗಿದೆ. ರೂ 530.34 ಲಕ್ಷ ಬಿಡುಗಡೆ ಮಾಡಲಾಗಿದೆ. ರೂ.; 530.34 ಲಕ್ಷಗಳನ್ನು 36 ವಿದ್ಯಾರ್ಥಿ ನಿಲಯಗಳ ನಿರ್ವಹಣೆಗೆ ಮಾರ್ಚ್–2014ರ ಅಂತ್ಯಕ್ಕೆ ವೆಚ್ಚ ಮಾಡಲಾಗಿದೆ.

8) **ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ವಹಣೆ :–**

ರಾಜ್ಯದಲ್ಲಿ ಮತೀಯ ಅಲ್ಪಸಂಖ್ಯಾತರ ಜನಾಂಗದವರಿಗೆ 6 ರಿಂದ 10ನೇ ತರಗತಿಯವರೆಗೆ ಉತ್ತಮ ಶಿಕ್ಷಣ ನೀಡುವ ದೃಷ್ಟಿಯಿಂದ ವಿವಿಧ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ 50 ಮೊರಾರ್ಜಿದೇಸಾಯಿ ವಸತಿ ಶಾಲೆಗಳು, 5 ಮುಸ್ಲಿಂ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.

2013–14ನೇ ಸಾಲಿಗೆ ಈ ಯೋಜನೇತರದಡಿ 2835.50 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 2835.50 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 2835.50ಲಕ್ಷ ವೆಚ್ಚ ಮಾಡಲಾಗಿದ್ದು 10813 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**9) ಜೈನ್ ಸಮುದಾಯದ ವಿದ್ಯಾರ್ಥಿವೇತನ:–**

ಕೇಂದ್ರ ಸರ್ಕಾರದ ಕಾರ್ಯಕ್ರಮವಾದ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನವನ್ನು ಜೈನ್ ಸಮುದಾಯದ ವಿದ್ಯಾರ್ಥಿಗಳಿಗೆ ನೀಡಲು ಅವಕಾಶವಿಲ್ಲದಿರುವುದರಿಂದ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರಾಜ್ಯ ಸರ್ಕಾರದಿಂದ ಜೈನ್ ಸಮುದಾಯದ ವಿದ್ಯಾರ್ಥಿಗಳು ಮೆಟ್ರಿಕ್ ಪೂರ್ವ ಮೆಟ್ರಿಕ್ ನಂತರ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು 2012–13ನೇಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ.

2013–14ನೇ ಸಾಲಿನಲ್ಲಿ 2013–14ನೇ ಸಾಲಿಗೆ ಈ ಯೋಜನೇತರದಡಿ ರೂ. 1000.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 1000.00 ಲಕ್ಷ ಬಿಡುಗಡೆ ಮಾಡಿರುವುದನ್ನು ಮಾರ್ಚ್–2014ರ ಅಂತ್ಯಕ್ಕೆ ವೆಚ್ಚ ಮಾಡಲಾಗಿದ್ದು 56730 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**10) ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ:–**

ಕೇಂದ್ರ ಮತ್ತು ಕರ್ನಾಟಕ ಲೋಕಸೇವಾ ಆಯೋಗಗಳು ಹಾಗೂ ಇತರೆ ನೇಮಕಾತಿ ಪ್ರಾಧಿಕಾರಿಗಳು ನಡೆಸುವ ಪರೀಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ಸರ್ಕಾರವು ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿಯನ್ನು ಪ್ರತಿಷ್ಠಿತ ಖಾಸಗಿ ಸಂಸ್ಥೆಗಳ ಮೂಲಕ ತರಬೇತಿ ನೀಡಲು 2013–14ನೇ ಸಾಲಿನಲ್ಲಿ ರೂ. 100.00 ಲಕ್ಷ ಅನುದಾನ ಒದಗಿಸಲಾಗಿದೆ. ರೂ. 100.00 ಲಕ್ಷ ಬಿಡುಗಡೆ ಮಾಡಲಾಗಿದ್ದು 93 ಯುಪಿಎಸ್‌ಸಿ+2580 ಸಿಇಟಿ ಫ್ರಿಕೋಚಿಂಗ್ ತರಬೇತಿ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ರೂ. 150.00 ಲಕ್ಷ ವೆಚ್ಚ ಮಾಡಲಾಗಿದೆ. (ರೂ.50.00 ಲಕ್ಷ ಶಾದಿಮಹಲ್/ಸಮುದಾಯಭವನ ಯೋಜನೆಯಿಂದ ಮನರ್ ವಿನಿಯೋಗಿ ಸಲಾಗಿದೆ.)

**11) ಅಲ್ಪಸಂಖ್ಯಾತರ ಸಮುದಾಯದ ವಿದ್ಯಾರ್ಥಿಗಳಿಗೆ ಪರಿಹಾರಕ ಭೋಧನೆ ನೀಡುವ ಯೋಜನೆ:–**

ಅಲ್ಪಸಂಖ್ಯಾತರ ವಿದ್ಯಾರ್ಥಿಗಳು 7 ಮತ್ತು 10ನೇ ತರಗತಿಯವರೆಗೆ ಉರ್ದು ಮಾಧ್ಯಮದಲ್ಲಿ ಕಲಿತು ಬಂದಿದ್ದು, ಮುಂದಿನ ತರಗತಿಗಳಲ್ಲಿ ಇಂಗ್ಲೀಷ್ ಅಥವಾ ಕನ್ನಡ ಮಾಧ್ಯಮಕ್ಕೆ ಹೊಂದಿಕೊಳ್ಳುವುದು ಅವರುಗಳಿಗೆ ಕಷ್ಟದಾಯಕವಾಗಿರುತ್ತದೆ. ಸಾಮಾನ್ಯವಾಗಿ ಇಂತಹ ಮಾಧ್ಯಮಗಳ ಬದಲಾವಣೆಯಿಂದ ಮುಂದಿನ ದಿನಗಳಲ್ಲಿ ವಿದ್ಯಾರ್ಥಿಗಳು ಅಂಕಗಣಿತ ಮತ್ತು ಸಾಮಾನ್ಯ ವಿಜ್ಞಾನ, ವಿಷಯಗಳನ್ನು ಇಂಗ್ಲೀಷ್/ಕನ್ನಡ ಮಾಧ್ಯಮದಲ್ಲಿ ಅರ್ಥಮಾಡಿಕೊಳ್ಳಲು ವಿಫಲವಾಗಿ ಶಾಲೆಯನ್ನು ಬಿಡುವ ಸಂಗತಿಯಾಗುತ್ತಿರುವ ಪ್ರಯುಕ್ತ ಈ ನ್ಯೂನತೆ ಮತ್ತು ಶಾಲೆ ಬಿಡುವರನ್ನು ತಡೆಗಟ್ಟಲು ಪರಿಹಾರಕ ಭೋಧನೆಯನ್ನು ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

2013–14ನೇ ಸಾಲಿಗೆ ರೂ. 675.00 ಲಕ್ಷ ಒದಗಿಸಿದ್ದು, ರೂ. 675.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 675.00 ಲಕ್ಷ ವೆಚ್ಚ ಮಾಡಲಾಗಿದೆ. 1435 ಕೇಂದ್ರಗಳಿಗೆ ಅನುದಾನ ಬಿಡುಗಡೆ ಮಾಡಲಾಗಿದೆ.

**12) ದುಡಿಯುವ ಮಹಿಳೆಯರ ವಸತಿ:–**

ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿಯನ್ನು ಒದಗಿಸುವ ಸಲುವಾಗಿ ಸರ್ಕಾರೇತರ ಸಂಸ್ಥೆಗಳಿಗೆ, ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯಗಳ ನಿರ್ವಹಣೆಗೆ ಸೂಕ್ತ ಅನುದಾನವನ್ನು ನೀಡುವ ಕಾರ್ಯಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಈ ಕಾರ್ಯಕ್ರಮಕ್ಕಾಗಿ ರೂ. 50.00 ಲಕ್ಷ ಆಯವ್ಯಯ ಒದಗಿಸಲಾಗಿದ್ದು, ರೂ. 50.00 ಲಕ್ಷ ಬಿಡುಗಡೆ ಮಾಡಲಾಗಿದೆ. ರೂ.20.00 ಲಕ್ಷಗಳನ್ನು ಉರ್ದು ಅಕಾಡೆಮಿಗೆ ಮನರ್ ವಿನಿಯೋಗಿಸಲಾಗಿದೆ.

**13) ಅಲ್ಪಸಂಖ್ಯಾತರಿಗಾಗಿ ಹಾಸ್ಟಲ್ ಕಟ್ಟಡಗಳ ನಿರ್ಮಾಣ: (ವಿಶೇಷ ಅಭಿವೃದ್ಧಿ ಯೋಜನೆ)**

ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡಗಳನ್ನು ನಿರ್ಮಿಸುವ ಸಲುವಾಗಿ ಈ ಕಾರ್ಯಕ್ರಮವನ್ನು ಜಾರಿಗೊಳಿಸಲಾಗುತ್ತಿದೆ. ಮಂಜೂರಾದ 160 ವಿದ್ಯಾರ್ಥಿ ನಿಲಯಗಳ ಪೈಕಿ 87 ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣ ಪೂರ್ಣಗೊಂಡು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. 23 ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡುತ್ತಿದ್ದು ಅವುಗಳು ಸಹ ಪ್ರಗತಿ ಹಂತದಲ್ಲಿವೆ.

2013–14ನೇ ಸಾಲಿಗೆ ರೂ.5000.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 5000.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 5000.00 ಲಕ್ಷ ವೆಚ್ಚ ಮಾಡಲಾಗಿದ್ದು 70 ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ, 4 ನಿವೇಶನ ಖರೀದಿ, 16 ಕಾಮಗಾರಿಗೆ ಬಿಡುಗಡೆ ಮಾಡಿದೆ.

**14) ಅಲ್ಪಸಂಖ್ಯಾತರಿಗೆ ಹುಡ್ಕೋ ಸಾಲಗಳು:–**

ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಕಟ್ಟಡಗಳನ್ನು ಹುಡ್ಕೋ ನೆರವಿನಿಂದ ಸಾಲ ಪಡೆದು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರಿಂದ ನಿರ್ಮಿಸಲಾಗಿದೆ. ಸದರಿ ಸಾಲವನ್ನು ಹಂತ ಹಂತವಾಗಿ ಮರುಪಾವತಿ ಮಾಡುವ ಸಲುವಾಗಿ 2013–14ನೇ ಸಾಲಿನಲ್ಲಿ ರೂ. 14.78 ಲಕ್ಷ ಒದಗಿಸಿದ್ದು, ರೂ. 14.78 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 14.78 ಲಕ್ಷ ವೆಚ್ಚ ಮಾಡಲಾಗಿದೆ.

**ಅ) ಸಾಲ ಮೇಲುಸ್ತುವಾರಿ:–**

**ಆ) ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ಮಾಣ:**

ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಕಟ್ಟಡ ನಿರ್ಮಾಣಕ್ಕಾಗಿ 2013–14ನೇ ಸಾಲಿನಲ್ಲಿ ರೂ. 2500.00 ಲಕ್ಷ ಒದಗಿಸಿದ್ದು, ರೂ. 2500.00 ಲಕ್ಷ ಬಿಡುಗಡೆ ಮಾಡಲಾಗಿದೆ. 15 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಸಂಕೀರ್ಣ ನಿರ್ಮಾಣಕ್ಕೆ ಮಾರ್ಚ್–2014ರ ಅಂತ್ಯಕ್ಕೆ ರೂ. 2500.00 ಲಕ್ಷ ವೆಚ್ಚ ಮಾಡಲು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ರವರಿಗೆ ಬಿಡುಗಡೆ ಮಾಡಲಾಗಿದೆ.

**15) ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ:–**

ರಾಜ್ಯದ ಅಲ್ಪಸಂಖ್ಯಾತರ ವಿದ್ಯಾರ್ಥಿಗಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲು ಸ್ನಾತಕೋತ್ತರ, ಪಿ.ಹೆಚ್‌ಡಿ ಮತ್ತು ಡೆಂಟಲ್ ಕೋರ್ಸ ಮುಂತಾದವುಗಳನ್ನು ವಿದೇಶದ ವಿಶ್ವವಿದ್ಯಾನಿಲಯಗಳಲ್ಲಿ ವ್ಯಾಸಂಗ ಮಾಡಲು ವಿದ್ಯಾರ್ಥಿ ವೇತನ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

2013–14ನೇ ಸಾಲಿಗೆ ರೂ. 300.00 ಲಕ್ಷ ಒದಗಿಸಲಾಗಿದ್ದು, ರೂ. 300.00 ಲಕ್ಷ ಬಿಡುಗಡೆ ಮಾಡಲಾಗಿದೆ. ರೂ.298.20 ಲಕ್ಷ ವೆಚ್ಚ ಮಾಡಲಾಗಿದ್ದು 60 ಅಭ್ಯರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**16) ಕರ್ನಾಟಕದಲ್ಲಿ ವಕ್ಫ್ ಸಂಪತ್ತಿನ ರಕ್ಷಣೆ:–**

ರಾಜ್ಯದ ಅಲ್ಪಸಂಖ್ಯಾತರ ಮುಸ್ಲಿಂ ಸಮಾಜದ ಖಬರಸ್ತಾನ, ದರ್ಗಾ, ಈದ್ಗಾ ಹಾಗೂ ಮಸೀದಿಗಳ ಆಸ್ತಿಗಳ ಅಕ್ರಮ ಒತ್ತುವರಿ, ಅನಧಿಕೃತ ಸ್ವಾದೀನ ಮತ್ತು ವಿವಾದಗಳನ್ನು ತಡೆಗಟ್ಟಲು ಸುತ್ತ ಗೋಡೆಯನ್ನು ಹಾಕುವ ಸಲುವಾಗಿ 2013–14ನೇ ಸಾಲಿನಲ್ಲಿ ರೂ. 400.00 ಲಕ್ಷ ಒದಗಿಸಲಾಗಿದ್ದು ರೂ. 400.00 ಲಕ್ಷ ಬಿಡುಗಡೆ ಮಾಡಿರುವುದನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಕರ್ನಾಟಕ ವಕ್ಫ್ ಮಂಡಳಿ ರವರಿಗೆ ಮರು ಬಿಡುಗಡೆ ಮಾಡಲಾಗಿದೆ.

**17) ವಕ್ಫ್ ಸಂಸ್ಥೆಗಳ ಮುಝ್ಹಾವನ್‌ಗಳ ಪೇಷ್ ಇಮಾಮ್‌ಗಳಿಗೆ ಗೌರವಧನ:–**

ರಾಜ್ಯದ ಮಸೀದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೇಶ್ ಇಮಾಮ್ ಹಾಗೂ ಮೌಜನ್‌ಗಳಿಗೆ ಗೌರವಧನ ನೀಡುವ ಯೋಜನೆಗೆ 2013–14ನೇ ಸಾಲಿನ ಆಯವ್ಯಯದಲ್ಲಿ ರೂ. 200.00 ಲಕ್ಷ ಒದಗಿಸಿದಲಾಗಿದ್ದು ರೂ. 200.00 ಲಕ್ಷ ಬಿಡುಗಡೆ ಮಾಡಿರುವುದನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಕರ್ನಾಟಕ ವಕ್ಫ್ ಮಂಡಳಿ ರವರಿಗೆ ಮರು ಬಿಡುಗಡೆ ಮಾಡಲಾಗಿದೆ.

**18) ಕ್ರೈಸ್ ಸುಮುದಾಯದ ಅಭಿವೃದ್ಧಿ:–**

ರಾಜ್ಯದಲ್ಲಿನ ಕ್ರಿಶ್ಚಿಯನ್ ಸಮುದಾಯದ ಸಮಗ್ರ ಅಭಿವೃದ್ಧಿಗಾಗಿ ಸಮುದಾಯ ಭವನಗಳ ನಿರ್ಮಾಣ, ಚರ್ಚುಗಳ ದುರಸ್ತಿ ಮತ್ತು ನವೀಕರಣ ಅನಾಥಾಶ್ರಮ ಮತ್ತು ವೃದ್ಧಾಶ್ರಮಗಳ ಮೂಲ ಸೌಕರ್ಯಗಳಿಗೆ ಅನುದಾನ, ಕೌಶಲ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ ನಿರುದ್ಯೋಗ ನಿವಾರಣೆ ಅರಿವು, ಶ್ರಮಶಕ್ತಿ ಮತ್ತು ಸಣ್ಣ ಪ್ರಮಾಣದ ಸಾಲ ಯೋಜನೆಗಳು, ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. 2013–14ನೇ ಸಾಲಿನಲ್ಲಿ ರೂ. 6000.00 ಲಕ್ಷ ಆಯವ್ಯಯ ಒದಗಿಸಲಾಗಿದ್ದು ರೂ. 6000.00 ಲಕ್ಷ ಬಿಡುಗಡೆ ಮಾಡಲಾಗಿದೆ. ನಿರ್ದೇಶನಾಲಯದಿಂದ ಚರ್ಚ್‌ಗಳ ದುರಸ್ಥಿ/ನವೀಕರಣ, ಉತ್ತೇಜನ ಮತ್ತು ನರ್ಸಿಂಗ್ ಕಾರ್ಯಕ್ರಮಗಳಿಗೆ ರೂ. 3403.21 ಲಕ್ಷ ವೆಚ್ಚ ಮಾಡಲಾಗಿದೆ. 20312 ಫಲಾನುಭವಿಗಳು ಇದರ ಪ್ರಯೋಜನ ಪಡೆದಿರುವರು.

**19) ಅರಿವು ಮೂಡಿಸುವ ಮಾಹಿತಿ ಕೇಂದ್ರಗಳನ್ನು ಸ್ಥಾಪಿಸುವುದು.**

ಸರ್ಕಾರಿ ಆದೇಶ ಸಂಖ್ಯೆ: ಎಂಡಬ್ಲ್ಯೂಡಿ 400 ಎಂಡಿಎಸ್ 2013 ದಿನಾಂಕ: 07.09.2013 ರ ಆದೇಶದನ್ವಯ ರಾಜ್ಯದ ಪ್ರತಿ ಜಿಲ್ಲಾ ಕೇಂದ್ರ ಸ್ಥಾನ ಹಾಗೂ ಅಲ್ಪಸಂಖ್ಯಾತರ ನಿರ್ದೇಶಾನಾಲಯದಲ್ಲಿ ಪ್ರತ್ಯೇಕ ಮಾಹಿತಿ ಕೇಂದ್ರವನ್ನು ತೆರೆದು ತಾಲ್ಲೂಕು ಮಟ್ಟದಲ್ಲಿ ಈ ಬಗ್ಗೆ ನಿಯತ ಕಾಲದಲ್ಲಿ ಕಾರ್ಯಾಗಾರವನ್ನು ಹಮ್ಮಿಕೊಳ್ಳುವ ಮೂಲಕ ಪ್ರಚಾರ ಕಾರ್ಯ ಕೈಗೊಳ್ಳಲು ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. 2013–14ನೇ ಸಾಲಿನಲ್ಲಿ ರೂ. 1000.00 ಲಕ್ಷ ಒದಗಿಸಲಾಗಿದ್ದು, ರೂ. 800.00 ಲಕ್ಷ ಬಿಡುಗಡೆ ಮಾಡಲಾಗಿದೆ. 30 ಜಿಲ್ಲೆಗಳಲ್ಲಿ ಕೇಂದ್ರ ಸ್ಥಾಪನೆ ಹಾಗೂ ಕೇಂದ್ರ ಸ್ಥಾನದಲ್ಲಿ ಮಾಹಿತಿ ಕೇಂದ್ರ ಸ್ಥಾಪಿಸಲು ರೂ. 800.00 ಲಕ್ಷ ವೆಚ್ಚ ಮಾಡಲಾಗಿದೆ.

**20) ಬಿದಾಯಿ ಯೋಜನೆ:**

ಸರ್ಕಾರಿ ಆದೇಶ ಸಂಖ್ಯೆ: ಎಂಡಬ್ಲ್ಯೂಡಿ 533 ಎಂಡಿಎಸ್ 2013 ದಿನಾಂಕ: 13.11.2013 ರ ಆದೇಶದನ್ವಯ ಆರ್ಥಿಕವಾಗಿ ಹಿಂದುಳಿದ ಅಲ್ಪಸಂಖ್ಯಾತರ ಕುಟುಂಬದ ಹೆಣ್ಣು ಮಕ್ಕಳಿಗೆ /ವಿಚ್ಛೇದಿತ ಮಹಿಳೆ ಮತ್ತು ವಿಧವೆಯರಿಗೆ ಮದುವೆಯ ನಿಮಿತ್ತ ವಿವಾಹದ ಖರ್ಚು–ವೆಚ್ಚಗಳಿಗೆ ರೂ. 50,000/–ಗಳ ಸಹಾಯಧನ ಮಂಜೂರು ಮಾಡಲು ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ. 2013–14ನೇ ಸಾಲಿನಲ್ಲಿ ರೂ. 1000.00 ಲಕ್ಷ ಒದಗಿಸಲಾಗಿದ್ದು, ರೂ. 1000.00 ಲಕ್ಷ ಬಿಡುಗಡೆ ಮಾಡಲಾಗಿದ್ದು, ರೂ.1000.00 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. 2000 ಫಲಾನುಭವಿಗಳು ಇದರ ಪ್ರಯೋಜನ ಪಡೆದಿರುವರು.

**II. ಜಿಲ್ಲಾವಲಯ ಕಾರ್ಯಕ್ರಮ:–**

**21) ಅಲ್ಪಸಂಖ್ಯಾತರಿಗಾಗಿ ಹಾಸ್ಟೆಲ್‌ಗಳು:**

**ಅ) ಮೆಟ್ರಿಕ್ ನಂತರದ ವಸತಿನಿಲಯಗಳು:**

ಮತೀಯ ಅಲ್ಪಸಂಖ್ಯಾತರ ಮೆಟ್ರಿಕ್ ನಂತರದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು 50/75 ಸಂಖ್ಯಾಬಲದೊಂದಿಗೆ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಮಂಜೂರಾಗಿದ್ದು ಕಾರ್ಯನಿರ್ವಹಿಸುತ್ತಿವೆ. ಮೆಟ್ರಿಕ್ ನಂತರದ ಕೋರ್ಸ್‌ಗಳಿಗೆ ಪ್ರವೇಶ ಪಡೆದ ವಿದ್ಯಾರ್ಥಿಗೆ ಮಾಹೆಯಾನ ರೂ.1000/– ರಂತೆ ಊಟ, ವಸತಿ ಹಾಗೂ ಉಚಿತ ಗ್ರಂಥಾಲಯ ಸೌಕರ್ಯವನ್ನು ಕಲ್ಪಿಸಲಾಗುವುದು.

**ಆ) ಮೆಟ್ರಿಕ್ ಪೂರ್ವ ವಸತಿನಿಲಯಗಳು:**

ಮತೀಯ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು 50 ಸಂಖ್ಯಾಬಲದೊಂದಿಗೆ ವಿವಿಧ ಜಿಲ್ಲೆಗಳು ಮತ್ತು ತಾಲ್ಲೂಕುಗಳಲ್ಲಿ ಮಂಜೂರಾಗಿದ್ದು ಕಾರ್ಯನಿರ್ವಹಿಸುತ್ತಿವೆ. 5ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಅಲ್ಪಸಂಖ್ಯಾತರ ವಿದ್ಯಾರ್ಥಿಗೆ ಮಾಹೆಯಾನ ರೂ. 900/– ರಂತೆ 10 ತಿಂಗಳಿಗೆ ಊಟ, ವಸತಿ, ಸಮವಸ್ತ್ರ, ಲೇಖನ ಸಾಮಾಗ್ರಿಗಳು ಮತ್ತು ಇತರೆ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

2013–14ನೇ ಸಾಲಿಗೆ ಈ ಕಾರ್ಯಕ್ರಮಗಳಿಗಾಗಿ ರೂ. 1539.18 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 1539.18 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ.1538.75 ಲಕ್ಷ ವೆಚ್ಚ ಮಾಡಲಾಗಿದ್ದು, 6280 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**22) ಅಲ್ಪಸಂಖ್ಯಾತರಿಗೆ ತರಬೇತಿ : (ಕಾನೂನು ಪದವೀಧರರಿಗೆ ಶಿಷ್ಯವೇತನ):–**

ಈ ಕಾರ್ಯಕ್ರಮದಡಿಯಲ್ಲಿ ಪ್ರತಿ ಜಿಲ್ಲೆಗೆ ಇಬ್ಬರು ಅಭ್ಯರ್ಥಿಗಳಿಗೆ ತರಬೇತಿ ನೀಡಲಾಗುತ್ತಿದೆ. ಕಾನೂನು ಪದವಿ ಪಡೆದಿರುವ ಅಭ್ಯರ್ಥಿಗಳಿಗೆ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ಅನುಭವವುಳ್ಳ ವಕೀಲರಿಂದ ತರಬೇತಿ ನೀಡಲಾಗುವುದು. ತರಬೇತಿ ಅವಧಿ 4 ವರ್ಷವಾಗಿದ್ದು, ಮಾಹೆಯಾನ ರೂ. 1,000/ ಗಳಂತೆ ತರಬೇತಿ ಭತ್ಯೆ ನೀಡಲಾಗುತ್ತಿದೆ. ಈ ತರಬೇತಿಗೆ ಆಬ್ಯರ್ಥಿಗಳನ್ನು ಆಯ್ಕೆ ಮಾಡಲು ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡ ಅಧ್ಯಕ್ಷರು ಮತ್ತು ಸದಸ್ಯರನ್ನೊಳಗೊಂಡ ಆಯ್ಕೆ ಸಮಿತಿ ಇರುತ್ತದೆ.

| | | |
|---|---|---|
| 1 | ಜಿಲ್ಲಾಧಿಕಾರಗಳು/ ಜಿಲ್ಲಾ ದಂಡಾಧಿಕಾರಿಗಳು | ಅಧ್ಯಕ್ಷರು |
| 2 | ಜಿಲ್ಲಾ ವಕೀಲರ ಅಸೋಸಿಯೇಷನ್, ಅಧ್ಯಕ್ಷರು | ಸದಸ್ಯರು |
| 3 | ಜಿಲ್ಲಾ ಸರ್ಕಾರಿ ಅಭಿಯೋಜಕ (ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್) | ಸದಸ್ಯರು |
| 4 | ಜಿಲ್ಲಾ ನ್ಯಾಯಿಕ ನೆರವು ಮಂಡಳಿಯ ಕಾರ್ಯದರ್ಶಿಗಳು | ಸದಸ್ಯರು |
| 5 | ಜಿಲ್ಲಾ ಸರ್ಕಾರಿ ವಕೀಲರು (ಗೌರ್ನಮೆಂಟ್ ಪ್ಲೀಡರ್) | ಸದಸ್ಯರು |
| 6 | ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು | ಸದಸ್ಯ ಕಾರ್ಯದರ್ಶಿಗಳು |

ಈ ಕಾರ್ಯಕ್ರಮಕ್ಕೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಮುಖ್ಯ ಅಂಶಗಳನ್ನು ಗಮನಿಸಬೇಕು.

1. ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ರಾಜ್ಯದ ನಿವಾಸಿಯಾಗಿರಬೇಕು.
2. ಅಭ್ಯರ್ಥಿಯ ವಾರ್ಷಿಕ ಆದಾಯವು ರೂ. 15000 ಕ್ಕೆ ಮೀರಿರಬಾರದು. ಪ್ರವರ್ಗ–1 ರಡಿಯಲ್ಲಿ ಬರುವ ಅಲ್ಪಸಂಖ್ಯಾತ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.
3. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.
4. ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳೊಳಗೆ ಇರಬೇಕು ಮತ್ತು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
5. ಅಭ್ಯರ್ಥಿಗಳು ಸಲ್ಲಿಸುವ ಮಾಹೆಯಾನ ದಿನಚರಿಯಲ್ಲಿ ಪರಿಶೀಲಿಸಿ ತರಬೇತಿ ಭತ್ಯೆಯನ್ನು ಮಂಜೂರು ಮಾಡಲಾಗುವುದು.
6. ಅಭ್ಯರ್ಥಿಯು ತರಬೇತಿಯನ್ನು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆ ಪತ್ರ ನೀಡಬೇಕು. ಒಂದು ವೇಳೆ ಸರ್ಕಾರಿ ಉದ್ಯೋಗ ದೊರಕಿದಲ್ಲಿ ಅಥವಾ ನ್ಯಾಯಾಧೀಕಾರಿಯಾಗಿ ನೇಮಕಾತಿ ಹೊಂದಿದ್ದಲ್ಲಿ ಜಿಲ್ಲಾ ಸಮಿತಿಯ ಗಮನಕ್ಕೆ ತಂದು ತರಬೇತಿ ಬಿಡಬಹುದು. ವಿಶೇಷ ಸಂದರ್ಭದಲ್ಲಿ ತರಬೇತಿ ಬಿಡಬೇಕಾದಲ್ಲಿ ಸರ್ಕಾರದ ಅನುಮತಿ ಪಡೆಯಬೇಕು.
7. ಪ್ರತಿ ಜಿಲ್ಲೆಗೆ ಎರಡು ಅಭ್ಯಥಿಗಳನ್ನು ಆಯ್ಕೆ ಮಾಡಬೇಕಾಗಿರುವುದರಿಂದ ಇವುಗಳಲ್ಲಿ ಒಬ್ಬ ಅಭ್ಯರ್ಥಿಯನ್ನು ಮುಸ್ಲಿಂ ಹಾಗೂ ಇನ್ನೊಬ್ಬ ಅಭ್ಯರ್ಥಿಯನ್ನು ಇತರೆ ಅಲ್ಪಸಂಖ್ಯಾತರ ಸಮುದಾಯಗಳಿಂದ ಆಯ್ಕೆ ಮಾಡಬೇಕು.

**ವೇಳಾಪಟ್ಟಿ :**

| | | |
|---|---|---|
| 1 | ಅರ್ಜಿಗಳನ್ನು ಆಹ್ವಾನಿಸುವ ದಿನಾಂಕ | ಜುಲೈ 15 |
| 2 | ಅರ್ಜಿ ಸ್ವೀಕರಿಸಲು ಕಡೆಯ ದಿನಾಂಕ | ಜುಲೈ 30 |
| 3 | ಆಯ್ಕೆ ಸಮಿತಿ ಸಭೆ ನಡೆಸುವ ದಿನಾಂಕ | ಆಗಸ್ಟ್ 10 |
| 4 | ಅಭ್ಯರ್ಥಿಗಳ ಆಯ್ಕೆ ಪಟ್ಟಿ ಪ್ರಕಟಣೆ | ಆಗಸ್ಟ್ 10 |

2013–14ನೇ ಸಾಲಿಗೆ ರೂ. 33.59 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 33.50 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 32.50 ಲಕ್ಷ ವೆಚ್ಚ ಮಾಡಲಾಗಿದ್ದು, 200 ಅಭ್ಯರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**23) ಅಲ್ಪಸಂಖ್ಯಾತರ ಐಟಿಐ/ಡಿಪ್ಲೋಮಾ ವಿದ್ಯಾರ್ಥಿಗಳಿಗೆ ಶಿಷ್ಯವೇತನ:**

ರಾಜ್ಯದಲ್ಲಿರುವ ಸರ್ಕಾರಿ ಹಾಗೂ ಅಂಗೀಕೃತ ಕೈಗಾರಿಕೆ ಸಂಸ್ಥೆಗಳಲ್ಲಿ ಮತ್ತು ಪಾಲಿಟೆಕ್ನಿಕ್‌ಗಳಲ್ಲಿ ಐಟಿಐ ಮತ್ತು ಡಿಪ್ಲೋಮಾ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳು ರೂ.150/– ರಂತೆ, 10 ತಿಂಗಳಿಗೆ ಶಿಷ್ಯವೇತನ ನೀಡಲಾಗುತ್ತಿದೆ. 2013–14ನೇ ಸಾಲಿನಲ್ಲಿ ರೂ. 47.53 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 47.50 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 46.15 ಲಕ್ಷ ವೆಚ್ಚ ಮಾಡಲಾಗಿದ್ದು, 4002 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**24) ಅಲ್ಪಸಂಖ್ಯಾತರ ಸಂಸ್ಥೆಗಳಿಂದ ನಡೆಲ್ಪಡುತ್ತಿರುವ ವಿದ್ಯಾರ್ಥಿನಿಲಯಗಳು:**

ರಾಜ್ಯದಲ್ಲಿ 60 ಮೆಟ್ರಿಕ ಪೂರ್ವ ಅನುದಾನಿತ ವಸತಿನಿಲಯಗಳಲ್ಲಿ 3350 ವಿದ್ಯಾರ್ಥಿಗಳು ಇದ್ದು, ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.500/– ರಂತೆ 10 ತಿಂಗಳಿಗೆ, ಬೋಜನ ವೆಚ್ಚಕ್ಕಾಗಿ ಅನುದಾನ ನೀಡಲಾಗುತ್ತಿದೆ.

2013–14 ನೇ ಸಾಲಿಗೆ ರೂ. 78.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 75.50 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 75.10 ಲಕ್ಷ ವೆಚ್ಚ ಮಾಡಲಾಗಿದ್ದು, 1450 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆದಿರುವರು.

**25) ಅಲ್ಪಸಂಖ್ಯಾತರಿಗೆ ವೃತ್ತಿ ತರಬೇತಿ:**

ಅಲ್ಪಸಂಖ್ಯಾತರ ನಿರುದ್ಯೋಗಿ ಯುವಕ : ಯುವತಿಯರಿಗೆ ವಿವಿಧ ವೃತ್ತಿಪರ ಕೋರ್ಸ್‌ಗಳಾದ ಫ್ಯಾಷನ್ ಡಿಸೈನ್, ಗಾರ್ಮೆಂಟ್ಸ್ ಮೇಕಿಂಗ್, ಸರ್ವಿಸ್ಸಿಂಗ್ ಇನ್ ಎಲೆಕ್ಟ್ರಾನಿಕ್ ಎಕ್ವಿಪ್‌ಮೆಂಟ್ಸ್, ಎಲೆಕ್ಟ್ರಿಕಲ್ ವೈರಮನ್ ಟ್ರೈನಿಂಗ್ ಫಾರ್ ವೈಯರಿಂಗ್ ಲೈಸೆನ್ಸ್, ಏರ್ ಕಂಡೀಷನಿಂಗ್ ಇನ್ ರೆಫ್ರೇಜಿರೇಷನ್, ರೇಡಿಯೋ, ಟಿ.ವಿ, ರಿಪೇರಿ, ಟೈಲರಿಂಗ್, ಹಾಗೂ ಇತರೆ ತರಬೇತಿಗಳನ್ನು ತಾಂತ್ರಿಕ ಶಿಕ್ಷಣ ಇಲಾಖೆಯ ಪಾಲಿಟೆಕ್ನಿಕ್‌ಗಳ ಮೂಲಕ ತರಬೇತಿ ನೀಡಿ ಸ್ವಯಂ ಉದ್ಯೋಗದಲ್ಲಿ ಸ್ವಾವಲಂಬಿಗಳಾಗಲು ಪ್ರೋತ್ಸಾಹ ನೀಡಲಾಗುತ್ತಿದೆ. ಪ್ರತಿ ವಿದ್ಯಾರ್ಥಿಗೆ ತರಬೇತಿ ಭತ್ಯೆ ಮಾಹೆಯಾನ ರೂ.500.00 ರಂತೆ ನೀಡಲಾಗುವುದು.

2013–14 ನೇ ಸಾಲಿಗೆ ರೂ. 31.99 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 28.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 27.75 ಲಕ್ಷ ವೆಚ್ಚ ಮಾಡಲಾಗಿದ್ದು 450 ಅಭ್ಯರ್ಥಿಗಳು ಇದರ ಪ್ರಯೋಜನ ಪಡೆದಿರುವರು. ಈ ಯೋಜನೆಯನ್ನು ರಾಜ್ಯದ 14 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

**26) ಅಲ್ಪಸಂಖ್ಯಾತರರಿಗಾಗಿ ಅನಾಥಾಲಯಗಳು:**

ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ 40 ಅನಾಥಾಲಯಗಳಿಗೆ 3569, ಅನಾಥ: ನಿರ್ಗತಿಕ ಮಕ್ಕಳು ಇದ್ದು, 1ನೇ ತರಗತಿಯಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವರು ಅನಾಥ : ನಿರ್ಗತಿಕರು, ಅನಾಥಾಲಯಗಳಲ್ಲಿ ಪ್ರವೇಶ ಪಡೆಯಲು ಅರ್ಹರಿರುತ್ತಾರೆ. ಸ್ವಯಂ ಸೇವಾ ಸಂಸ್ಥೆಗಳಲ್ಲಿನ ಪ್ರತಿ ವಿದ್ಯಾರ್ಥಿಗೆ ಭೋಜನ ವೆಚ್ಚಕ್ಕಾಗಿ ಪ್ರತಿ ತಿಂಗಳಿಗೆ ರೂ. 350/– ರಂತೆ 12 ತಿಂಗಳಿಗೆ ಅನುದಾನ ನೀಡಲಾಗುವುದು.

2013–14ನೇ ಸಾಲಿಗೆ ರೂ. 80.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 80.00 ಲಕ್ಷ ಬಿಡುಗಡೆ ಮಾಡಲಾಗಿದೆ. ಮಾರ್ಚ್–2014ರ ಅಂತ್ಯಕ್ಕೆ ರೂ. 78.30 ಲಕ್ಷ ವೆಚ್ಚ ಮಾಡಲಾಗಿದ್ದು, 2425 ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿರುವರು.

**III. ಕೇಂದ್ರ ಸರ್ಕಾರದ ಕಾರ್ಯಕ್ರಮಗಳು :**

**27) ಮೆರಿಟ್–ಕಮ್–ಮೀನ್ಸ್ ಆಧಾರಿತ ವಿದ್ಯಾರ್ಥಿ ವೇತನ:**

ಈ ಯೋಜನೆಯಡಿ ಮುಸ್ಲಿಂ, ಕ್ರಿಶ್ಚಿಯನ್, ಸಿಖ್ಖರು ಹಾಗೂ ಬೌದ್ಧರು ಅರ್ಹರು. ಈ ಯೋಜನೆಯಡಿ ಆರ್ಹರಿದ್ದು ತಾಂತ್ರಿಕ ಹಾಗೂ ವೃತ್ತಿಪರ ವಿವಿಧ ಕೋರ್ಸುಗಳಿಗೆ ಮಾತ್ರ ಅವಕಾಶವಿದೆ. ಈ ವಿದ್ಯಾರ್ಥಿ ವೇತನ ಮಂಜೂರಿಗೆ ಮುಖ್ಯ ನಿಬಂಧನೆಗಳನ್ನು ವಿಧಿಸಲಾಗಿದೆ. ವಿದ್ಯಾರ್ಥಿಯು ಶೇ 50 ರಷ್ಟು ಅಂಕಗಳಿಸಿರಬೇಕು/ ಸ್ಪರ್ಧಾತ್ಮಾಕ ಪರೀಕ್ಷೆ ಮೂಲಕ ಆಯ್ಕೆಯಾಗಿರಬೇಕು. ಕುಟುಂಬದ ವಾರ್ಷಿಕ ವರಮಾನ ರೂ.2.50 ಲಕ್ಷಗಳು. ಮೀರಿರಬಾರದು. ಶೇ 30 ರಷ್ಟು ವಿದ್ಯಾರ್ಥಿ ವೇತನವನ್ನು ಬಾಲಕಿಯರಿಗಾಗಿ ಮೀಸಲಿರಿಸಿದೆ. ಗರಿಷ್ಠ ರೂ. 20 ಸಾವಿರದವರೆಗೆ ಶುಲ್ಕ ಮರುಪಾವತಿಸಲು ಅವಕಾಶವಿದೆ ಹಾಗೂ ಪ್ರತಿ ತಿಂಗಳಿಗೆ ಡೇ ಸ್ಕಾಲರ್ ಹಾಗೂ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ. 5000/– ಹಾಗೂ 10000/– ನಿರ್ವಹಣೆ ಭತ್ಯೆ ಪಾವತಿಸಲಾಗುತ್ತದೆ.

2013–14ನೇ ಸಾಲಿಗೆ ರೂ. 2300.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ.2300.00 ಲಕ್ಷ ಬಿಡುಗಡೆ ಮಾಡಿರುವುದನ್ನು, ಮಾರ್ಚ್–2014ರ ಅಂತ್ಯಕ್ಕೆ ವೆಚ್ಚ ಮಾಡಲಾಗಿದೆ. 8461 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಲಾಗಿದೆ.

28) **ಅಲ್ಪಸಂಖ್ಯಾತರಿಗಾಗಿ ಬಹುವಲಯವಾರು ಅಭಿವೃದ್ದಿ ಯೋಜನೆ (MSDP)**

ಅಲ್ಪಸಂಖ್ಯಾತರ ಇಲಾಖೆಗೆ ಬೀದರ್, ಗುಲ್ಬರ್ಗಾ ಮತ್ತು ಯಾದಗಿರಿ ಜಿಲ್ಲೆಗಳಿಗೆ ಎಂಎಸ್‌ಡಿಪಿ ಕಾರ್ಯಕ್ರಮದಡಿ ಅಂಗನವಾಡಿ ಕೇಂದ್ರ, ಲೇಬರ್‌ವಾರ್ಡ್, ಇಂದಿರಾ ಆವಾಜ್ ಯೋಜನೆಯಡಿ ಮನೆಗಳ ನಿರ್ಮಾಣ, ಹಾಸ್ಪಲ್‌ಗಳ ನಿರ್ಮಾಣ ಮಾಡಲು 2013–14ನೇ ಸಾಲಿಗೆ ರೂ.4000.00 ಲಕ್ಷ ಆಯವ್ಯಯ ಒದಗಿಸಿದೆ. ಸರ್ಕಾರದಿಂದ ಅನುದಾನ ಬಿಡುಗಡೆಯಾಗಿರುವುದಿಲ್ಲ.

**29) ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಕಾರ್ಯಕ್ರಮ:**

1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರಾತಿಗೆ ಅವಕಾಶವಿದೆ. ಅರ್ಜಿ ಸಲ್ಲಿಸುವ ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯ ಮಿತಿ ರೂ. 1.00 ಲಕ್ಷಕ್ಕೆ ಮೀರಿರಬಾರದು, ಹಾಗೂ ವಿದ್ಯಾರ್ಥಿಯು ಹಿಂದಿನ ತರಗತಿಯಲ್ಲಿ ಶೇ.50 ರಷ್ಟು ಅಂಕ ಗಳಿಸಿರಬೇಕು. ಶೇ. 30 ರಷ್ಟು ವಿದ್ಯಾರ್ಥಿ ವೇತನವನ್ನು ಬಾಲಕಿಯರಿಗಾಗಿ ಮೀಸಲಿರಿಸಿದೆ.

2013–14ನೇ ಸಾಲಿಗೆ ರೂ. 10260.00 ಲಕ್ಷ ಆಯವ್ಯಯ ಒದಗಿಸಿದ್ದು, ರೂ. 10260.00 ಲಕ್ಷ ಬಿಡುಗಡೆ ಮಾಡಿರುವುದನ್ನು, ಮಾರ್ಚ್–2014ರ ಅಂತ್ಯಕ್ಕೆ ವೆಚ್ಚ ಮಾಡಲಾಗಿದೆ, 737351 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಲಾಗಿದೆ.

**30) ಮೆಟ್ರಿಕ್ ನಂತರ ವಿದ್ಯಾರ್ಥಿ ವೇತನ:**

ಪಿಯುಸಿ ನಂತರದ ಎಲ್ಲಾ ಕೋರ್ಸುಗಳು, ಪದವಿ, ಸ್ನಾತಕೋತ್ತರ ಹಾಗೂ ಪಿಹೆಚ್.ಡಿ. ಯವರಿಗೆ ವಿದ್ಯಾರ್ಥಿ ವೇತನ ಮಂಜೂರಿಗೆ ಅವಕಾಶವಿದೆ. ಈ ಯೋಜನೆಯಡಿ ವಿದ್ಯಾರ್ಥಿ ವೇತನ ಮಂಜೂರಿಗೆ ಮುಖ್ಯ ನಿಬಂಧನೆಗಳನ್ನು ವಿಧಿಸಲಾಗಿದೆ.

ಹಿಂದಿನ ತರಗತಿಗಳಲ್ಲಿ ಶೇ.50 ರಷ್ಟು ಅಂಕ ಗಳಿಸಿರಬೇಕು. ಕುಟುಂಬದ ವಾರ್ಷಿಕ ವರಮಾನ ರೂ. 2.00 ಲಕ್ಷಕ್ಕೆ ಮೀರಿರಬಾರದು. ಶೇ 30 ರಷ್ಟು ವಿದ್ಯಾರ್ಥಿ ವೇತನವನ್ನು ಬಾಲಕಿಯರಿಗಾಗಿ ಮೀಸಲಿರಿಸಿದೆ.

2013–14ನೇ ಸಾಲಿನಲ್ಲಿ ರೂ. 3100.00 ಲಕ್ಷ ಒದಗಿಸಿದ್ದು, ರೂ. 3100.00 ಲಕ್ಷ ಬಿಡುಗಡೆ ಮಾಡಿರುವುದನ್ನು ಮಾರ್ಚ್–2014ರ ಅಂತ್ಯಕ್ಕೆ ವೆಚ್ಚ ಮಾಡಲಾಗಿದ್ದು, 65780 ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಲಾಗಿದೆ.

## ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

**ಪೀಠಿಕೆ**

ರಾಜ್ಯದ ಮತೀಯ ಅಲ್ಪಸಂಖ್ಯಾತರ ಜನಸಂಖ್ಯೆಯು, 2001ರ ಜನಗಣತಿ ಪ್ರಕಾರ, ಸುಮಾರು 82,93,576 ಆಗಿದ್ದು, ಇದು ರಾಜ್ಯದ ಒಟ್ಟು ಜನಸಂಖ್ಯೆಯ ಶೇ.15.69 ರಷ್ಟು ಜನಸಂಖ್ಯೆಯನ್ನು ಪ್ರತಿನಿಧಿಸಿರುತ್ತದೆ. ರಾಜ್ಯದಲ್ಲಿ ನೆಲೆಸಿರುವ ಮುಸಲ್ಮಾನರು, ಕ್ರೈಸ್ತರು, ಜೈನರು, ಬೌದ್ಧ ಧರ್ಮೀಯರು, ಸಿಖ್ಖರು ಮತ್ತು ಪಾರ್ಸಿ ಜನಾಂಗದವರು ಮತೀಯ ಅಲ್ಪಸಂಖ್ಯಾತರ ಗುಂಪಿಗೆ ಒಳಪಟ್ಟಿರುತ್ತಾರೆ. ಅಲ್ಪಸಂಖ್ಯಾತರ ಪೈಕಿ ಬಹಳಷ್ಟು ಜನರು ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದು, ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯು ಚಿಂತಾಜನಕವಾಗಿದೆ.

**ಉದ್ದೇಶ**

ರಾಜ್ಯದ ಮತೀಯ ಅಲ್ಪಸಂಖ್ಯಾತರ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಯನ್ನು ಅಭಿವೃದ್ಧಿಗೊಳಿಸಲು ಮತ್ತು ಅವರನ್ನು ಇತರ ಮುಂದುವರೆದ ಸಮುದಾಯದ ಜನರಂತೆ ರಾಜ್ಯದ ಮುಖ್ಯವಾಹಿನಿಗೆ ತರಲು ಉದ್ದೇಶಿಸಿದ ಫಲವಾಗಿ ರಾಜ್ಯ ಸರ್ಕಾರವು 1986 ರಲ್ಲಿ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಎಂಬ ಪ್ರತ್ಯೇಕ ನಿಗಮವನ್ನು ಸ್ಥಾಪಿಸಿರುತ್ತದೆ.

**ನಿಗಮದ ರಚನೆ**

ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮವು ದಿನಾಂಕ 07.02.1986 ರಂದು ರಾಜ್ಯ ಸರ್ಕಾರದಿಂದ ಸ್ಥಾಪಿತಗೊಂಡಿದ್ದು, ರಾಜ್ಯ ಸರ್ಕಾರಿ ಸ್ವಾಮ್ಯದ ಉದ್ದಿಮೆಯಾಗಿದ್ದು, ರೂ. 65.00 ಕೋಟಿಗಳ ಅಧಿಕೃತ ಷೇರು ಬಂಡವಾಳವನ್ನು ಮತ್ತು ರೂ. 1.00 ಕೋಟಿಯ ಪಾವತಿಯಾದ ಬಂಡವಾಳವನ್ನು ಹೊಂದಿತ್ತು. ಪ್ರಸ್ತುತ, ಈ ನಿಗಮವು ರೂ. 150.00 ಕೋಟಿಗಳ ಅಧಿಕೃತ ಷೇರು ಬಂಡವಾಳವನ್ನು ಹೊಂದಿರುತ್ತದೆ. ರಾಜ್ಯ ಸರ್ಕಾರದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೇಲುಸ್ತುವಾರಿಯಲ್ಲಿ ಈ ನಿಗಮವು ಕಾರ್ಯ ನಿರ್ವಹಿಸುತ್ತಿದೆ. ನಿಗಮದ ನೋಂದಾಯಿತ ಕಛೇರಿ ಬೆಂಗಳೂರು ನಗರದಲ್ಲಿದ್ದು, ಇದರ ಜಿಲ್ಲಾ ಕಛೇರಿಯನ್ನು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಸ್ಥಳದಲ್ಲಿ ಹೊಂದಿರುತ್ತದೆ. ರಾಜ್ಯ ಸರ್ಕಾರ ಪ್ರಾಯೋಜಿತ ಅಭಿವೃದ್ಧಿ ಯೋಜನೆಗಳನ್ನು ರಾಜ್ಯಾದ್ಯಂತ ಹೊಂದಿರುವ ನಿಗಮವ ಜಿಲ್ಲಾ ಕಛೇರಿಗಳ ಮೂಲಕ ಜಾರಿಗೊಳಿಸಿ ರಾಜ್ಯದ ಮತೀಯ ಅಲ್ಪಸಂಖ್ಯಾತರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಯನ್ನು ಅಭಿವೃದ್ಧಿ ಪಡಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ.

ನಿರ್ದೇಶಕರ ಮಂಡಳಿ ಮತ್ತು ವ್ಯವಸ್ಥಾಪಕ ನಿರ್ದೇಶಕರು ನಿಗಮದ ನೇತೃತ್ವವನ್ನು ವಹಿಸಿರುತ್ತಾರೆ. ನಿಗಮದ ಯೋಜನೆಗಳನ್ನು ಕಾರ್ಯಗತಗೊಳಿಸಲು, ವ್ಯವಸ್ಥಾಪಕ ನಿರ್ದೇಶಕರ ಅಧೀನದಲ್ಲಿ ಕೆಳಕಂಡ ಅಧಿಕಾರಿ ವರ್ಗ ಮತ್ತು ಸಿಬ್ಬಂದಿ ವರ್ಗದವರು ಕಾರ್ಯನಿರ್ವಹಿಸುತ್ತಿರುತ್ತಾರೆ:

| ಕ್ರಸಂ | ಹುದ್ದೆ | ಸಂಖ್ಯೆ |
|---|---|---|
| 1. | ಆಡಳಿತ ಅಧಿಕಾರಿ | 01 |
| 2. | ಕಂಪೆನಿ ಕಾರ್ಯದರ್ಶಿ (ರೀಟೇನರ್‌ಶಿಪ್ ಆಧಾರದ ಮೇಲೆ) | 01 |
| 3. | ವ್ಯವಸ್ಥಾಪಕ | 01 |
| 4. | ಭೂವಿಜ್ಞಾನಿ (ರೀಟೇನರ್‌ಶಿಪ್ ಆಧಾರದ ಮೇಲೆ) | 01 |
| 5. | ಅಭಿವೃದ್ಧಿ ಅಧಿಕಾರಿ | 02 |
| 6. | ಲೆಕ್ಕ ಅಧೀಕ್ಷಕ | 01 |
| 7. | ಅಭಿವೃದ್ಧಿ ಪರವೀಕ್ಷಕ | 01 |
| 8. | ಪ್ರಥಮ ದರ್ಜೆ ಸಹಾಯಕ | 04 |
| 9. | ವಾಹನ ಚಾಲಕ ಮತ್ತು ಗ್ರೂಪ್ 'ಡಿ' ನೌಕರರು | 06 |

ಜಿಲ್ಲಾ ಮಟ್ಟದಲ್ಲಿ, ಏಳು ಜಿಲ್ಲೆಗಳು (ಅಂದರೆ ಬೀದರ್, ವಿಜಾಪುರ, ಗುಲಬರ್ಗಾ, ಬಳ್ಳಾರಿ, ರಾಯಚೂರು, ಧಾರವಾಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು) 'ಅಲ್ಪಸಂಖ್ಯಾತರು ಅಧಿಕವಾಗಿ ನೆಲೆಸಿರುವ ಜಿಲ್ಲೆಗಳು' ಎಂದು ಗುರ್ತಿಸಲ್ಪಟ್ಟಿವೆ. ಈ ಏಳು ಜಿಲ್ಲೆಗಳಲ್ಲಿ ನಿಗಮವು ನೇಮಕ ಮಾಡಿರುವ ಜಿಲ್ಲಾ ವ್ಯವಸ್ಥಾಪಕರು ಕಾರ್ಯ ನಿರ್ವಹಿಸುತ್ತಿದ್ದು, 20 ಜಿಲ್ಲೆಗಳಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ನೇಮಕ ಮಾಡಿರುವ ಜಿಲ್ಲಾ ವ್ಯವಸ್ಥಾಪಕರ ಅಧೀನದಲ್ಲಿ ಈ ನಿಗಮದ ಅಭಿವೃದ್ಧಿ ಪರಿವೀಕ್ಷಕರು ಕಾರ್ಯ ನಿರ್ವಹಿಸುತ್ತಿದ್ದು, ಉಳಿದ ಮೂರು ಜಿಲ್ಲೆಗಳಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಅಧಿಕಾರಿಗಳು ಈ ನಿಗಮದ ಕೆಲಸಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದಾರೆ.

**ನಿಗಮದ ಯೋಜನೆಗಳು:**

1. 'ಸ್ವಾವಲಂಬನ' ಮಾರ್ಜಿನ್ ಹಣ ಸಾಲ ಯೋಜನೆ
2. ಸಹಾಯಧನ ಯೋಜನೆ
3. 'ಅರಿವು' (ವಿದ್ಯಾಭ್ಯಾಸ ಸಾಲ) ಯೋಜನೆ

4. ಗಂಗಾ ಕಲ್ಯಾಣ ಯೋಜನೆ
5. 'ಶ್ರಮಶಕ್ತಿ' ಯೋಜನೆ
6. ಭೂಮಿ ಖರೀದಿ ಯೋಜನೆ
7. ಸಣ್ಣ (ಮೈಕ್ರೋ) ಸಾಲ ಯೋಜನೆ
8. ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮದ ಸಾಲದ ಯೋಜನೆಗಳು

**'ಸ್ವಾವಲಂಬನ' ಮಾರ್ಜಿನ್ ಹಣ ಸಾಲ ಯೋಜನೆ ಮತ್ತು ಸಹಾಯಧನ ಯೋಜನೆ**

ಜಾರಿಗೊಳಿಸಿದ ವರ್ಷ: 1986

ಯೋಜನಾ ವೆಚ್ಚ: ರಾಜ್ಯ ಸರ್ಕಾರದ ಶೇ.100ರಷ್ಟು ಪಾಲು

ಲೆಕ್ಕ ಶೀರ್ಷಿಕೆ: 4225–03–190–0–03–211 ಹಾಗೂ

2225–03–800–04–106

**ಯೋಜನೆ ಉದ್ದೇಶ:**

ಈ ಯೋಜನೆಯಡಿಯಲ್ಲಿ ಅಲ್ಪಸಂಖ್ಯಾತ ಸಮುದಾಯದ ಜನರಿಗೆ ವ್ಯಾಪಾರ, ಸಣ್ಣ ಪ್ರಮಾಣದ ಗುಡಿ ಕೈಗಾರಿಕೆ, ಸೇವಾಕ್ಷೇತ್ರ, ಕೃಷಿ ಆದಾರಿತ ಚಟುವಟಿಕೆಗಳು ಮುಂತಾದುವುಗಳನ್ನು ಪ್ರಾರಂಭಿಸಲು ಅಥವಾ ಅಭಿವೃದ್ಧಿಪಡಿಸಿಕೊಳ್ಳುವ ಸಲುವಾಗಿ ರಾಷ್ಟ್ರೀಕೃತ ಬ್ಯಾಂಕುಗಳು/ಹಣಕಾಸು ಸಂಸ್ಥೆಗಳ ಸಹಕಾರ ಮತ್ತು ಸಹಯೋಗದೊಂದಿಗೆ ಸಾಲಸೌಲಭ್ಯವನ್ನು ಕಲ್ಪಿಸಲಾಗುತ್ತದೆ. ರೂ.1.00 ಲಕ್ಷದವರೆಗಿನ ಘಟಕ ವೆಚ್ಚಕ್ಕೆ, ವಾರ್ಷಿಕ ಶೇ.6ರಷ್ಟು ಬಡ್ಡಿ ದರದಲ್ಲಿ ಶೇ.20ರಷ್ಟು ಘಟಕವೆಚ್ಚವನ್ನು ಮಾರ್ಜಿನ್ ಹಣ ಸಾಲದ ರೂಪದಲ್ಲಿ ಮತ್ತು ಘಟಕ ವಚ್ಚದ ಶೇ.50ರಷ್ಟು ಅಥವಾ ಗರಿಷ್ಠ ರೂ.5,000/–ದವರೆಗೆ ಸಹಾಯಧನವನ್ನು ನಿಗಮವು ನೀಡುತ್ತಿದ್ದು, ಉಳಿದ ಸಾಲವನ್ನು ಬ್ಯಾಂಕುಗಳು/ಹಣಕಾಸಿನ ಸಂಸ್ಥೆಗಳು ಒದಗಿಸುತ್ತಿವೆ.

**ಹಣಕಾಸಿನ ನೆರವಿನ ವಿವರಗಳು ಕೆಳಕಂಡಂತಿವೆ:**

| ಕ್ರ ಸಂ | ಘಟಕ ವೆಚ್ಚ | ನಿಗಮದಿಂದ ಮಾರ್ಜಿನ್ ಹಣ ಸಾಲ | ನಿಗಮದಿಂದ ಸಹಾಯಧನ | ಫಲಾನುಭವಿಯ ವಂತಿಕೆ | ಬ್ಯಾಂಕ್/ಕೆಎಸ್‌ಎಫ್‌ಸಿ/ ಹಣಕಾಸು ಸಂಸ್ಥೆಯ ಪಾಲು |
|---|---|---|---|---|---|
| 1. | ರೂ.25,000/–ದವರೆಗೆ | –ಇಲ್ಲ– | ಘಟಕವೆಚ್ಚದ ಶೇ.50. ಗರಿಷ್ಠ ರೂ.5,000/– | –ಇಲ್ಲ– | ಘಟಕವೆಚ್ಚದ ಶೇ.50. ಗರಿಷ್ಠ ರೂ.20,000/– |
| 2. | ರೂ.25,001/–ರಿಂದ ರೂ.50,000/– | ಘಟಕವೆಚ್ಚದ ಶೇ.20. ಗರಿಷ್ಠ ರೂ.10,000/– | ಗರಿಷ್ಠ ರೂ.5,000/– | ಘಟಕವೆಚ್ಚದ ಶೇ.5. ಗರಿಷ್ಠ ರೂ.2,500/– | ಉಳಿದ ಹಣ. ಗರಿಷ್ಠ ರೂ.32,500/– |
| 3. | ರೂ.50,001/–ರಿಂದ ರೂ.1.00 ಲಕ್ಷ | ರೂ.10,000/– ದಿಂದ ರೂ.20,000/– | ಗರಿಷ್ಠ ರೂ.5,000/– | ಘಟಕವೆಚ್ಚದ ಶೇ.5. ಗರಿಷ್ಠ ರೂ.5,000/– | ಉಳಿದ ಹಣ. ಗರಿಷ್ಠ ರೂ.70,000/– |

**ಅರ್ಹತೆ:**

ಅರ್ಜಿದಾರರು ಹುಟ್ಟಿನಿಂದಾಗಲಿ ಅಥವಾ ವಾಸದಿಂದಾಗಲಿ ರಾಜ್ಯದ ಖಾಯಂ ನಿವಾಸಿಯಾಗಿರಬೇಕು. ಸರ್ಕಾರಿ ಆದೇಶದ ಪ್ರಕಾರ ಅರ್ಜಿದಾರರು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರಬೇಕು. ಈ ಯೋಜನೆಯಡಿಯಲ್ಲಿ ಕೌಟುಂಬಿಕ ವಾರ್ಷಿಕ ಆದಾಯ ರೂ.22,000/– ಮೀರದಿರುವ ಅರ್ಜಿದಾರರು ಸಾಲ ಪಡೆಯಲು ಅರ್ಹರು. ಅರ್ಜಿದಾರರು ತಾವು ಪ್ರಾರಂಭಿಸುವ ಸ್ವಂತ ವ್ಯಾಪಾರದ ಬಗ್ಗೆ ಸಾಕಷ್ಟು ಅನುಭವ ಹೊಂದಿರಬೇಕು.

**ಸಾಲ ಪಡೆಯುವ ವಿಧಾನ**

ಸಾಲ ಪಡೆಯಬಯಸುವ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಅರ್ಜಿದಾರರು ಜಿಲ್ಲಾ ಮಟ್ಟದಲ್ಲಿರುವ ನಿಗಮದ ಜಿಲ್ಲಾ ವ್ಯವಸ್ಥಾಪಕರ ಕಛೇರಿಯಿಂದ ನಿಗದಿತ ಅರ್ಜಿಯನ್ನು ಪಡೆದು, ಅದನ್ನು ಭರ್ತಿಮಾಡಿ, ಅರ್ಜಿಯಲ್ಲಿ ಸೂಚಿಸಿರುವಂತೆ ಜಾತಿ ಮತ್ತು ಆದಾಯ ಪ್ರಮಾಣ ಪತ್ರ, ಯೋಜನಾ ವರದಿ ಮತ್ತು ವಿಳಾಸ ಸೂಚಿಸುವ ಪುರಾವೆಯೊಂದಿಗೆ ಅದೇ ಕಛೇರಿಗೆ ಸಲ್ಲಿಸಬೇಕು. ಈ ಅರ್ಜಿಗಳನ್ನು ಪರಿಶೀಲಿಸಿ, ಅರ್ಜಿದಾರರಿ ನೆಲೆಸಿರುವ ಸ್ಥಳದ ವ್ಯಾಪ್ತಿಯಲ್ಲಿ ಸೇವಾಪ್ರದೇಶವನ್ನು ಹೊಂದಿರುವ ಬ್ಯಾಂಕ್/ಹಣಕಾಸಿನ ಸಂಸ್ಥೆ/ಸಹಕಾರ ಸಂಘಕ್ಕೆ ಅರ್ಜಿಯನ್ನು ಕಳುಹಿಸಲಾಗುತ್ತದೆ.

ಬ್ಯಾಂಕ್/ಹಣಕಾಸು ಸಂಸ್ಥೆಯಿಂದ ಸಾಲ ಮಂಜೂರಾದ ನಂತರ ಅಂತಹ ಪ್ರಸ್ತಾವನೆಯನ್ನು ನಿಗಮವು ಪರಿಗಣಿಸಿ, ನಿಗಮವು ಸಾಲ ನೀಡಲು ಅನುಮೋದನೆ ನೀಡುವ ಜಿಲ್ಲಾ ಸಮಿತಿಯ ಮುಂದೆ ಪ್ರಸ್ತಾವನೆಯನ್ನು ಸಲ್ಲಿಸಿ, ಜಿಲ್ಲಾ ಸಮಿತಿ ಅನುಮೋದನೆ ಪಡೆದ ನಂತರ ಅಯಾ ಯೋಜನೆಯಡಿಯಲ್ಲಿ ನಿಗಮದಿಂದ ಮಾರ್ಜಿನ್ ಹಣ ಸಾಲ ಮತ್ತು ಸಹಾಯಧನ ಅಥವಾ ಕೇವಲ ಸಹಾಯಧನವನ್ನು ಬಿಡುಗಡೆ ಮಾಡಲಾಗುತ್ತಿದೆ.

'ಸ್ವಾವಲಂಬನ' ಮಾರ್ಜಿನ್ ಹಣ ಸಾಲ ಯೋಜನೆ ಮತ್ತು ಸಹಾಯಧನ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ 6347 ಫಲಾನುಭವಿಗಳಿಗೆ ರೂ.800.59 ಲಕ್ಷದಷ್ಟು ಸಾಲವನ್ನು ಒದಗಿಸಿದೆ. ಹಾಗೆಯೇ 2009–10ನೇ ಸಾಲಿನಲ್ಲಿ 2802 ಫಲಾನುಭವಿಗಳಿಗೆ ರೂ.462.60 ಲಕ್ಷದಷ್ಟು

ಸಾಲವನ್ನು ಒದಗಿಸಿದೆ. 2010–11ನೇ ಸಾಲಿನಲ್ಲಿ 1873 ಫಲಾನುಭವಿಗಳಿಗೆ ರೂ.335.77 ಲಕ್ಷದಷ್ಟು ಸಾಲವನ್ನು ಒದಗಿಸಿದೆ. 2011–12ನೇ ಸಾಲಿನಲ್ಲಿ 2583 ಫಲಾನುಭವಿಗಳಿಗೆ 409.05 ಲಕ್ಷದಷ್ಟು ಸಾಲವನ್ನು ಒದಗಿಸಿದೆ. **ಸದರಿ ಯೋಜನೆಯಡಿಯಲ್ಲಿ ಕಳೆದ 5 ವರ್ಷಗಳ ಅವಧಿಯಲ್ಲಿ 116472 ಫಲಾನುಭವಿಗಳಿಗೆ ರೂ.2307.95 ಲಕ್ಷದಷ್ಟು ಸಹಾಯಧನವನ್ನು ಒದಗಿಸಿದೆ.**

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 700.00 | 7000 | 700.00 | 6347 | 800.59 |
| 2009–10 | 400.00 | 4000 | 400.00 | 2802 | 462.60 |
| 2010–11 | 400.00 | 3200 | 400.00 | 1873 | 335.77 |
| 2011–12 | 4000.00 | 4000 | 400.00 | 2583 | 299.94 |
| 2012–13 | 400.00 | 4000 | 400.00 | 2867 | 409.05 |
| **ಒಟ್ಟು** | **2300** | **22200** | **2300.00** | **16472** | **2307.95** |

ಮೇಲೆ ತಿಳಿಸಿದಂತೆ, ಈ ಯೋಜನೆಯನ್ನು ಹಣಕಾಸು ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ನಿಗಮವು ಗಮನಿಸಿರುವಂತೆ, ಬಡ ಅಲ್ಪಸಂಖ್ಯಾತರಿಗೆ ಸಾಲ ಸೌಲಭ್ಯವನ್ನು ನೀಡುವಲ್ಲಿ ಹಣಕಾಸು ಸಂಸ್ಥೆಗಳ ಸ್ಪಂದನವು ಆಶಾದಾಯಕವಾಗಿಲ್ಲದೆ, ಹಣಕಾಸು ಸಂಸ್ಥೆಗಳು ನೀಡುವ ಸಾಲಕ್ಕೆ ಯೋಗ್ಯ ಖಾತರಿಯನ್ನು ಒದಗಿಸಲು ಅಲ್ಪಸಂಖ್ಯಾತರಿಗೆ ಸೌಕರ್ಯಗಳಿಲ್ಲದಿರುವುದರಿಂದ, ಹಣಕಾಸು ಸಂಸ್ಥೆಗಳು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಹಿಂಜರಿಯುತ್ತಿವೆ.

**'ಅರಿವು' (ವಿದ್ಯಾಭ್ಯಾಸ ಸಾಲ) ಯೋಜನೆ"**

**ಯೋಜನೆ ಉದ್ದೇಶ:–**

ಈ ಯೋಜನೆಯಡಿಯಲ್ಲಿ ವೃತ್ತಿಪರ ಶಿಕ್ಷಣ ಅಂದರೆ ವೈದ್ಯಕೀಯ, ದಂತ ವೈದ್ಯಕೀಯ, ಇಂಜನಿಯರಿಂಗ್, ಸ್ನಾತಕೋತ್ತರ ಪದವಿ, ಡಿಪ್ಲೋಮಾ, ನರ್ಸಿಂಗ್, ಬಿ.ಎಡ್, ಬಿಬಿಎಂ, ಬಿಸಿಎ, ಡಿ.ಎಡ್, ಐಟಿಐ ಮುಂತಾದ ಕೋರ್ಸ್‌ನ್ನು ಮಾಡಬಯಸುವ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಅವರು ವ್ಯಾಸಂಗ ಪೂರ್ಣಗೊಳಿಸುವವರೆಗೆ ಪ್ರತಿ ವರ್ಷಕ್ಕೆ ರೂ.5,000/–ದಿಂದ ರೂ.50,000/–ದವರೆಗೆ ಸಾಲವನ್ನು ಮಂಜೂರು ಮಾಡಲಾಗುತ್ತದೆ. ವ್ಯಾಸಂಗ ಪೂರ್ಣಗೊಳಿಸಿದ ನಂತರ ಶೇ.2ರಷ್ಟು ಬಡ್ಡಿ ದರದಲ್ಲಿ ವಿದ್ಯಾರ್ಥಿಯು ಸಾಲವನ್ನು ಮರುಪಾವತಿ ಮಾಡಬೇಕಾಗುತ್ತದೆ.

ಸಾಲ ಪಡೆಯಬಯಸುವ ಅರ್ಜಿದಾರರು ಜಿಲ್ಲಾ ಮಟ್ಟದಲ್ಲಿರುವ ನಿಗಮದ ಜಿಲ್ಲಾ ವ್ಯವಸ್ಥಾಪಕರ ಕಛೇರಿಯಿಂದ ನಿಗದಿತ ಅರ್ಜಿಯನ್ನು ಪಡೆದು, ಅದನ್ನು ಭರ್ತಿಮಾಡಿ, ಅದೇ ಕಛೇರಿಗೆ ಸಲ್ಲಿಸಬೇಕು. ಜಿಲ್ಲಾ ವ್ಯವಸ್ಥಾಪಕರು ಇಂತಹ ಅರ್ಜಿಗಳನ್ನು ಪರಿಶೀಲಿಸಿದ ನಂತರ ಆಯಾ ಜಿಲ್ಲಾ ಸಮಿತಿಯ ಅನುಮೋದನೆ ಪಡೆದು ಸಂಬಂಧಪಟ್ಟ ಕಡತವನ್ನು ನಿಗಮದ ಕೇಂದ್ರ ಕಛೇರಿಗೆ ಸಾಲ ಮಂಜೂರಾತಿ ಮತ್ತು ಬಿಡುಗಡೆಗಾಗಿ ಸಲ್ಲಿಸುತ್ತಾರೆ.

'ಅರಿವು' (ವಿದ್ಯಾಭ್ಯಾಸ ಸಾಲ) ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ 9721 ಫಲಾನುಭವಿಗಳಿಗೆ ರೂ.1488.12 ಲಕ್ಷದಷ್ಟು ಸಾಲವನ್ನು ಒದಗಿಸಿದೆ. ಹಾಗೆಯೇ 2009–10ನೇ ಸಾಲಿನಲ್ಲಿ 8796 ಫಲಾನುಭವಿಗಳಿಗೆ ರೂ.1310.92 ಲಕ್ಷದಷ್ಟು ಸಾಲವನ್ನು ಒದಗಿಸಿದೆ. 2010–11ನೇ ಸಾಲಿನಲ್ಲಿ 9399 ಫಲಾನುಭವಿಗಳಿಗೆ ರೂ.1749.70 ಲಕ್ಷದಷ್ಟು ಸಾಲವನ್ನು ಒದಗಿಸಿದೆ. **ಸದರಿ ಯೋಜನೆಯಡಿಯಲ್ಲಿ ಕಳೆದ 3 ವರ್ಷಗಳ ಅವಧಿಯಲ್ಲಿ 27916 ಫಲಾನುಭವಿಗಳಿಗೆ ರೂ.4548.74 ಲಕ್ಷದಷ್ಟು ಸಾಲವನ್ನು ಒದಗಿಸಿದೆ.**

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 900.00 | 5800 | 900.00 | 9721 | 1488.12 |
| 2009–10 | 1400.00 | 9300 | 1400.00 | 8796 | 1310.92 |
| 2010–11 | 1600.00 | 10600 | 1600.00 | 9400 | 1750.20 |
| 2011–12 | 2600.00 | 13000 | 2600.00 | 12726 | 2607.91 |
| 2012–13 | 3300.00 | 16500 | 3300.00 | 13071 | 3028.39 |
| **ಒಟ್ಟು** | **9800.00** | **55200** | **9800.00** | **53714** | **10185.54** |

**'ಶ್ರಮಶಕ್ತಿ' ಯೋಜನೆ**

**ಯೋಜನೆ ಉದ್ದೇಶ**

ಈ ಯೋಜನೆಯಡಿಯಲ್ಲಿ ಅಲ್ಪಸಂಖ್ಯಾತ ಕುಲಕಸುಬುದಾರರು ತರಬೇತಿ ಪಡೆದು ತಮ್ಮ ತಾಂತ್ರಿಕ ಕೌಶಲ್ಯವನ್ನು ವೃದ್ಧಿಸಿಕೊಂಡು ಅದೇ ಕಸುಬನ್ನು ಮುಂದುವರೆಸಲು ಅಥವಾ ಸಣ್ಣ ಕೈಗಾರಿಕೆಯನ್ನು ಸ್ಥಾಪಿಸಲು ಅಥವಾ ಅಭಿವೃದ್ಧಿಗೊಳಿಸುವ ಸಲುವಾಗಿ ನಿಗಮದಿಂದ ಕಡಿಮೆ ಬಡ್ಡಿ ದರದಲ್ಲಿ ರೂ.25,000/–ದವರೆಗೆ ಸಾಲ ಸೌಲಭ್ಯವನ್ನು ಕಲ್ಪಿಸಲಾಗುತ್ತದೆ. ಸಾಲ ಪಡೆದ ಫಲಾನುಭವಿಯು ನಿಗಮವು ನಿಗದಿಪಡಿಸಿದ 36 ತಿಂಗಳೊಳಗಾಗಿ ಶೇ.75ರಷ್ಟು ಸಾಲವನ್ನು ಮರುಪಾವತಿ ಮಾಡಿದಲ್ಲಿ ಉಳಿದ ಶೇ.25ರಷ್ಟು ಹಣವನ್ನು ಬ್ಯಾಕ್ ಎಂಡ್ ಸಹಾಯಧನವನ್ನಾಗಿ ಪರಿಗಣಿಸಲಾಗುತ್ತದೆ. ಫಲಾನುಭವಿಯು ತಾನು ಪಡೆದ ಸಾಲದ ಪೈಕಿ ಶೇ.75ರಷ್ಟು ಸಾಲವನ್ನು 36 ತಿಂಗಳೊಳಗಾಗಿ ಮರುಪಾವತಿ ಮಾಡದಿದ್ದಲ್ಲಿ ಉಳಿದ ಶೇ.25ರಷ್ಟು ಹಣವನ್ನು ಸಾಲವೆಂದು ಪರಿಗಣಿಸಲಾಗುತ್ತದೆ.

ಈ ಯೋಜನೆಯಡಿಯಲ್ಲಿ ರಾಜ್ಯದ ಖಾಯಂ ನಿವಾಸಿಯಾಗಿದ್ದು, ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿದ್ದು, ವಾರ್ಷಿಕ ಕೌಟುಂಬಿಕ ಆದಾಯ ರೂ.22,000/–ವನ್ನು ಮೀರದ ಅರ್ಜಿದಾರರು ಸಾಲವನ್ನು ಪಡೆಯಬಹುದು.

ಆಯಾ ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಪ್ರಮುಖ ದಿನಪತ್ರಿಕೆಗಳಲ್ಲಿ ಅರ್ಜಿಯನ್ನು ಆಹ್ವಾನಿಸಲಾಗುತ್ತದೆ. ನಿಗಮದಿಂದ ಸಾಲ ಪಡೆಯಬಯಸುವ ಅರ್ಜಿದಾರರು ನಿಗಮದ ಆಯಾ ಜಿಲ್ಲಾ ಕಛೇರಿಯಿಂದ ನಿಗದಿತ ನಮೂನೆಯ ಅರ್ಜಿಯನ್ನು ಪಡೆಯಬಹುದು ಅಥವಾ ನಿಗಮದ ವೆಬ್‌ಸೈಟ್‌ನ ಮೂಲಕ (www.kmdc.in) ಅರ್ಜಿಯನ್ನು ಡೌನ್‌ಲೋಡ್ ಮಾಡಿಕೊಳ್ಳಬಹುದು. ಸ್ವೀಕರಿಸಲ್ಪಟ್ಟ ಅರ್ಜಿಗಳನ್ನು ಆಯಾ ಜಿಲ್ಲಾ ವ್ಯವಸ್ಥಾಪಕರು ಪರಿಶೀಲಿಸಿ, ಜಿಲ್ಲಾ ಪಂಚಾಯತ್‌ನ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಯು ಅಧ್ಯಕ್ಷರಾಗಿರುವ ಜಿಲ್ಲಾ ಸಮಿತಿ ಮುಂದೆ ಮಂಡಿಸಿ, ಜಿಲ್ಲಾ ಸಮಿತಿ ಆಯ್ಕೆ ಮಾಡಿದ ಫಲಾನುಭವಿಯ ಪಟ್ಟಿಯೊಂದಿಗೆ ಸಂಬಂಧಿಸಿದ ನಡವಳಿಯನ್ನು ನಿಗಮದ ಕೇಂದ್ರ ಕಛೇರಿಗೆ ಸಾಲ ಮಂಜೂರಾತಿಗಾಗಿ ಸಲ್ಲಿಸುತ್ತಾರೆ.

ಈ ಯೋಜನೆಯಡಿಯಲ್ಲಿ ಸಾಲ ಪಡೆದ ಫಲಾನುಭವಿಯು ವಾರ್ಷಿಕ ಶೇ.4 ಬಡ್ಡಿ ದರದಲ್ಲಿ 36 ತಿಂಗಳೊಳಗಾಗಿ ಸಾಲವನ್ನು ಮರುಪಾವತಿ ಮಾಡಬೇಕಾಗುತ್ತದೆ.

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 1000.00 | 6720 | 1000.00 | 5036 | 749.92 |
| 2009–10 | 720.00 | 4800 | 720.00 | 5426 | 755.39 |
| 2010–11 | 1100.00 | 7333 | 1100.00 | 10290 | 1386.23 |
| 2011–12 | 1300.00 | 8667 | 1300.00 | 11115 | 1487.01 |
| 2012–13 | 1800.00 | 9000 | 1800.00 | 11137 | 1598.23 |
| **ಒಟ್ಟು** | **5920.00** | **36520** | **5920.00** | **43004** | **5976.78** |

**ಸಣ್ಣ (ಮೈಕ್ರೋ) ಸಾಲ ಯೋಜನೆ**

**ಯೋಜನೆ ಉದ್ದೇಶ**

ರಾಜ್ಯದ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಅಲ್ಪಸಂಖ್ಯಾತರು ಪ್ರಾರಂಭಿಸುವ ಸಣ್ಣ ವ್ಯಾಪಾರ ಅಂದರೆ, ತಳ್ಳುವ ಗಾಡಿಯಲ್ಲಿ ತರಕಾರಿ/ಹಣ್ಣು ಮಾರಾಟ, ಕಲಾಯಿ ಮಾಡುವಿಕೆ, ಹಾಸಿಗೆ ಮಾಡುವಿಕೆ, ಪಾನ್ ಶಾಪ್, ಕಡ್ಲೆಕಾಯಿ ವ್ಯಾಪಾರ, ಸೈಕಲ್ ರಿಪೇರಿ, ಗ್ಯಾಸ್/ಆರ್ಕ್ ವೆಲ್ಡಿಂಗ್, ವಲ್ಕನೈಸಿಂಗ್, ಮೀನು ಮಾರಾಟ, ಟೀ ಶಾಪ್ ಮುಂತಾದುವುಗಳಿಗೆ ನಿಗಮವು ರೂ.10,000/–ದ ಸಾಲಸೌಲಭ್ಯವನ್ನು ನೀಡುತ್ತದೆ.

ಸಾಲ ಪಡೆದ ಫಲಾನುಭವಿಯು ವಾರ್ಷಿಕ ಶೇ.5 ಬಡ್ಡಿದರದಲ್ಲಿ 36 ತಿಂಗಳೊಳಗಾಗಿ ಸಾಲವನ್ನು ಮರುಪಾವತಿ ಮಾಡಬೇಕಾಗುತ್ತದೆ.

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 900.00 | 9000 | 900.00 | 7613 | 639.85 |
| 2009–10 | 1200.00 | 12000 | 1200.00 | 9002 | 732.93 |
| 2010–11 | 1400.00 | 14000 | 1400.00 | 14597 | 1321.88 |

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2011–12 | 1900.00 | 19000 | 1900.00 | 15653 | 1533.53 |
| 2012–13 | 2400.00 | 24000 | 2400.00 | 17814 | 1766.75 |
| **ಒಟ್ಟು** | **7800.00** | **78000** | **7800.00** | **64679** | **5994.94** |

**ಗಂಗಾ ಕಲ್ಯಾಣ ಯೋಜನೆ**

**(ಅ) ಸಾಮೂಹಿಕ ನೀರಾವರಿ ಯೋಜನೆ**

ಏತ ನೀರಾವರಿ ಯೋಜನೆಯಡಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸದಾ ಕಾಲ ಹರಿಯುತ್ತಿರುವ ನೀರನ್ನು (ನದಿ) ಪೈಪ್‌ಲೈನ್ ಮೂಲಕ ಮೇಲೆತ್ತಿ ಕೃಷಿ ಜಮೀನಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲಾಗುತ್ತದೆ. ಹಾಗೆಯೇ, ಎಲ್ಲೆಲ್ಲಿ ಹರಿಯುವ ನೀರಿನ ವ್ಯವಸ್ಥೆ ಲಭ್ಯವಿರುವುದಿಲ್ಲವೋ ಅಂತಹ ಸ್ಥಳದಲ್ಲಿ ತಜ್ಞ ಭೂವಿಜ್ಞಾನಿ ಮೂಲಕ ಗುರುತಿಸಿದ ಜಲಬಿಂದು ವ್ಯಾಪ್ತಿಯೊಳಗೆ ನೆಲದಡಿಯಲ್ಲಿ ಕೊಳವೆಬಾವಿಯನ್ನು ಕೊರೆದು, ನೀರು ಸಂಗ್ರಹಿಸಲು ಟ್ಯಾಂಕ್‌ನ್ನು ನಿರ್ಮಿಸಿ ಅದಕ್ಕೆ ಅಳವಡಿಸಿದ ಪೈಪ್ ಮೂಲಕ ಕೃಷಿ ಭೂಮಿಗೆ ನೀರನ್ನು ಒದಗಿಸಲಾಗುತ್ತದೆ. ಇಂತಹ ಕೊಳವೆಬಾವಿಯನ್ನು ನಿಗಮದ ವೆಚ್ಚದಲ್ಲಿ 5 ವರ್ಷಗಳ ಕಾಲ ಸಂರಕ್ಷಿಸಲಾಗುತ್ತದೆ, ತದನಂತರ ಫಲಾನುಭವಿಗಳು ಹೊಂದಿರುವ ಗ್ರಾಹಕ ಸಹಕಾರ ಸಂಘಕ್ಕೆ ಹಸ್ತಾಂತರಿಸಲಾಗುತ್ತದೆ. ಕೃಷಿ ತಜ್ಞರ ಸಲಹೆ ಮತ್ತು ನೆರವು ನೀಡಿ ರೈತರು ಹೆಚ್ಚಿನ ಬೆಳೆ ಇಳುವರಿಯನ್ನು ಪಡೆಯಲು ತಿಳಿಸಲಾಗುತ್ತದೆ. ಈ ಯೋಜನೆಯು ಸಹಾಯಧನ ಯೋಜನೆಯಾಗಿದೆ.

**ಅರ್ಹತೆ**

1. ಸರ್ಕಾರಿ ಆದೇಶದಲ್ಲಿ ಸೂಚಿಸಿರುವಂತೆ ಫಲಾನುಭವಿಯು ಮತೀಯ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರಬೇಕು.
2. ರಾಜ್ಯದ ಖಾಯಂ ನಿವಾಸಿಯಾಗಿರಬೇಕು.
3. ಅವರು ಸಣ್ಣ ಮತ್ತು ಅತೀ ಸಣ್ಣ ರೈತರಾಗಿರಬೇಕು.
4. ವಾರ್ಷಿಕ ಕೌಟುಂಬಿಕ ಆದಾಯ ರೂ.22,000/–ನ್ನು ಮೀರಿರಬಾರದು.
5. ಒಟ್ಟು 8 ಎಕರೆ ಭೂಮಿ ಹೊಂದಿರುವ 3 ಫಲಾನುಭವಿಗಳಿಗೆ 2 ಕೊಳವೆಬಾವಿಗಳು ಮತ್ತು 15 ಎಕರೆ ಭೂಮಿ ಹೊಂದಿರುವ 5 ಫಲಾನುಭವಿಗಳಿಗೆ 3 ಕೊಳವೆಬಾವಿಗಳನ್ನು ಪಡೆಯುವರು. ಪ್ರತಿ ಫಲಾನುಭವಿಯು 2 ರಿಂದ 3 ಎಕರೆ ಭೂಮಿಯನ್ನು ಹೊಂದಿರಬೇಕು.

**(ಅ) ವೈಯಕ್ತಿಕ ಕೊಳವೆಬಾವಿ ಯೋಜನೆ**

ಈ ಯೋಜನೆಯಡಿಯಲ್ಲಿ 2 ರಿಂದ 5 ಎಕರೆ ಭೂಮಿಯನ್ನು ಹೊಂದಿರುವ ಫಲಾನುಭವಿಗೆ ಒಂದು ಕೊಳವೆಬಾವಿ ಅಥವಾ ತೆರೆದ ಬಾವಿಯನ್ನು ಕೊರೆಯಿಸಿ, ಅದಕ್ಕೆ ನಿಗಮದಿಂದ ಪಂಪ್‌ಸೆಟ್‌ನ್ನು ಒದಗಿಸಲಾಗುವುದು. ಪಂಪ್‌ಸೆಟ್ ಮತ್ತು ವಿದ್ಯುದ್ದೀಕರಣ ಸೇರಿ ಒಟ್ಟು ವೆಚ್ಚ ರೂ.1.00 ಲಕ್ಷವಾಗಿದೆ.

**ಅರ್ಹತೆ**

ಸರ್ಕಾರಿ ಆದೇಶದಲ್ಲಿ ಸೂಚಿಸಿರುವಂತೆ ಫಲಾನುಭವಿಯು ಮತೀಯ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರಬೇಕು.

1 ರಾಜ್ಯದ ಖಾಯಂ ನಿವಾಸಿಯಾಗಿರಬೇಕು.

2 ಅವರು ಸಣ್ಣ ಮತ್ತು ಅತೀ ಸಣ್ಣ ರೈತರಾಗಿರಬೇಕು.

3 ವಾರ್ಷಿಕ ಕೌಟುಂಬಿಕ ಆದಾಯ ರೂ.22,000/–ನ್ನು ಮೀರಿರಬಾರದು.

**ವಿಧಾನ**

ಆಯಾ ಜಿಲ್ಲಾ ವ್ಯವಸ್ಥಾಪಕರು ಸ್ಥಳೀಯ ದಿನಪತ್ರಿಕೆ ಮೂಲಕ ಅರ್ಜಿಯನ್ನು ಅಹ್ವಾನಿಸಿ, ಸ್ವೀಕೃತಗೊಂಡ ಅರ್ಜಿಗಳನ್ನು ಪರಿಶೀಲಿಸಿ, ಸಂಬಂಧಿಸಿದ ಮತಕ್ಷೇತ್ರದ ಶಾಸಕರು ಅಧ್ಯಕ್ಷರಾಗಿರುವ ಮತ್ತು ಅವರ ನೇತೃತ್ವದ ತಾಲ್ಲೂಕು ಸಮಿತಿ ಮುಂದೆ ಪ್ರಸ್ತಾವನೆಯನ್ನು ಮಂಡಿಸುತ್ತಾರೆ. ಸಮಿತಿಯು ಆಯ್ಕೆ ಮಾಡಿದ ಫಲಾನುಭವಿಗಳ ಪಟ್ಟಿಯೊಂದಿಗೆ ಸಂಬಂಧಿಸಿದ ನಡವಳಿಯನ್ನು ಜಿಲ್ಲಾ ವ್ಯವಸ್ಥಾಪಕರು ನಿಗಮದ ಕೇಂದ್ರ ಕಛೇರಿಗೆ ಕಳುಹಿಸುತ್ತಾರೆ.

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 695.56 | 1125 | 1102.23 | 976 | 839.36 |
| 2009–10 | 600.00 | 1000 | 1000.00 | 868 | 746.48 |
| 2010–11 | 1100.00 | 1510 | 1100.00 | 1250 | 1075.00 |
| 2011–12 | 1900.00 | 1900 | 1900.00 | 1640 | 1640.00 |
| 2012–13 | 1900.00 | 1900 | 1900.00 | – | – |
| **ಒಟ್ಟು** | **6195.56** | **7435** | **7002.23** | **4579** | **4167.54** |

**ಭೂ ಖರೀದಿ ಯೋಜನೆ**

**ಯೋಜನೆ ಉದ್ದೇಶ**

ಈ ಯೋಜನೆಯಡಿಯಲ್ಲಿ ನಿಗಮವು ಕೃಷಿ ಭೂಮಿಯನ್ನು ಖರೀದಿಸಿ, ಗ್ರಾಮೀಣ ಪ್ರದೇಶದಲ್ಲಿರುವ ಭೂಮಿ ರಹಿತ ಬಡ ಅಲ್ಪಸಂಖ್ಯಾತ ರೈತರಿಗೆ ಒದಗಿಸುತ್ತದೆ. ಪ್ರತಿ ಫಲಾನುಭವಿಗೆ 2 ಎಕರೆ ಖುಷ್ಕಿ ಅಥವಾ 1 ಎಕರೆ ತರಿ ಭೂಮಿಯನ್ನು ವಿತರಿಸಲಾಗುತ್ತದೆ.

ಸದರಿ ಯೋಜನೆಯನ್ನು ಯಶಸ್ವಿಯಾಗಿ ಜಾರಿಗೊಳಿಸುವ ಉದ್ದೇಶದಿಂದ ಮತ್ತು ಕೃಷಿ ಭೂಮಿ ಬೆಲೆಯು ಹೆಚ್ಚಿದ ಪರಿಣಾಮವಾಗಿ, ಅಂತಹ ಭೂಮಿಯ ಮಾರ್ಗದರ್ಶಿ ಬೆಲೆಯನ್ನು ಎರಡು ಪಟ್ಟು ಹೆಚ್ಚಿಸಿ ಅಂದರೆ ರೂ.2.50 ಲಕ್ಷಕ್ಕೆ ಮಿತಿಗೊಳಿಸಿ (ನೋಂದಣಿ ಶುಲ್ಕ ಸೇರಿ) ಸರ್ಕಾರವು ಇತ್ತೀಚೆಗೆ ಪರಿಷ್ಕೃತ ಆದೇಶವನ್ನು ಹೊರಡಿಸಿರುತ್ತದೆ. ಫಲಾನುಭವಿಗೆ ನೀಡುವ ಭೂಮಿ ಬೆಲೆಯಲ್ಲಿ ಶೇ.50ರಷ್ಟನ್ನು ಸಾಲ ಮತ್ತು ಉಳಿದ ಶೇ.50ರಷ್ಟನ್ನು ಸಹಾಯಧನವನ್ನಾಗಿ ಪರಿಗಣಿಸಲಾಗುತ್ತದೆ. ಫಲಾನುಭವಿಯು ತಾನು ಪಡೆದ ಸಾಲವನ್ನು ವಾರ್ಷಿಕ 6ರ ಬಡ್ಡಿ ದರದಲ್ಲಿ 10 ವರ್ಷ ಅವಧಿಯಲ್ಲಿ ಅರ್ಧ ವಾರ್ಷಿಕ ಕಂತಿನಲ್ಲಿ ಮರುಪಾವತಿ ಮಾಡಬೇಕಾಗುತ್ತದೆ. ರಾಜ್ಯದ ಆಯವ್ಯಯದಲ್ಲಿ ಹಂಚಿಕೆ ಮಾಡಿದ ಹಣ ಮತ್ತು ಅಲ್ಪಸಂಖ್ಯಾತರ ಜನಸಂಖ್ಯೆ ಆಧಾರದ ಮೇಲೆ, ನಿಗಮವು ಭೌತಿಕ ಮತ್ತು ಆರ್ಥಿಕ ಗುರಿಯನ್ನು ನಿಗದಿಪಡಿಸಿರುತ್ತದೆ. ಆಯಾ ಜಿಲ್ಲಾ ವ್ಯವಸ್ಥಾಪಕರು ಸ್ಥಳೀಯ ದಿನಪತ್ರಿಕೆಯಲ್ಲಿ ಅರ್ಜಿಯನ್ನು ಆಹ್ವಾನಿಸುತ್ತಾರೆ. ಸ್ವೀಕೃತಗೊಂಡ ಅರ್ಜಿಗಳನ್ನು ಪರಿಶೀಲಿಸಿ, ಆಯಾ ಜಿಲ್ಲೆಯ ಜಿಲ್ಲಾಧಿಕಾರಿಯವರು ಅಧ್ಯಕ್ಷರಾಗಿರುವ ಮತ್ತು ಅವರ ನೇತೃತ್ವದ ಜಿಲ್ಲಾ ಸಮಿತಿಯ ಮುಂದೆ ಮಂಡಿಸುತ್ತಾರೆ. ಜಿಲ್ಲಾ ಸಮಿತಿಯು ಫಲಾನುಭವಿಯನ್ನು ಆಯ್ಕೆ ಮಾಡುತ್ತದೆ.

**ಹಣಕಾಸಿನ ನೆರವು** **(ರೂ.ಲಕ್ಷಗಳಲ್ಲಿ)**

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 200.00 | – | – | – | – |
| 2009–10 | – | – | – | 36 | 28.23 |
| 2010–11 | – | 160 | 411.25 | – | – |
| 2011–12 | 200.000 | 80 | 200.00 | 29 | 54.41 |
| 2012–13 | – | – | – | 22 | 39.69 |
| **ಒಟ್ಟು** | **400.00** | **240** | **611.25** | **87** | **122.23** |

**ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮದ ನೇರ ಸಾಲ ಯೋಜನೆ**

**ಯೋಜನೆ ಉದ್ದೇಶ**

ದೆಹಲಿಯ ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮವು ತನ್ನ 'ರಾಜ್ಯ ವಿತರಣಾ ಸಂಸ್ಥೆ' ಮೂಲಕ ಮತೀಯ ಅಲ್ಪಸಂಖ್ಯಾತರಿಗೆ ಸಾಲ ಸೌಲಭ್ಯವನ್ನು ಒದಗಿಸುತ್ತಿದೆ. ರಾಜ್ಯದಲ್ಲಿ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮವು ಅದರ 'ರಾಜ್ಯ ವಿತರಣಾ ಸಂಸ್ಥೆ'ಯಾಗಿದೆ. ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮವು ಅನುಮೋದಿಸಿದ ಸಾಲ ಯೋಜನೆಗಳನ್ನು ಅನುಷ್ಠಾನಗೊಳಿಸಲು ಶೇ.3.5ರ ಬಡ್ಡಿ ದರದಲ್ಲಿ ಸಾಲವನ್ನು ರಾಜ್ಯ ವಿತರಣಾ ಸಂಸ್ಥೆಗೆ ಬಿಡುಗಡೆ ಮಾಡುತ್ತದೆ.

ಈ ನಿಗಮವು ಒಟ್ಟು ಘಟಕ ವೆಚ್ಚದಲ್ಲಿ ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮದ ಶೇ.85ರಷ್ಟು ಪಾಲು, ಈ ನಿಗಮದಿಂದ ಶೇ.15ರಷ್ಟು ಸಾಲವನ್ನು ಬಿಡುಗಡೆ ಮಾಡುತ್ತದೆ. ಇನ್ನುಳಿದ ಶೇ.5ರಷ್ಟು ಹಣವನ್ನು ಫಲಾನುಭವಿಯು ವಂತಿಕೆಯಾಗಿ ಭರಿಸಬೇಕಾಗುತ್ತದೆ. ನಿಗಮವು ಬಿಡುಗಡೆ ಮಾಡಿದ ಒಟ್ಟು ಸಾಲಕ್ಕೆ ವಾರ್ಷಿಕ ಶೇ.6ರ ಬಡ್ಡಿಯನ್ನು ವಿಧಿಸುತ್ತದೆ.

ಆಯಾ ಜಿಲ್ಲಾ ವ್ಯವಸ್ಥಾಪಕರು ಸ್ಥಳೀಯ ದಿನಪತ್ರಿಕೆ ಮೂಲಕ ಅರ್ಜಿಯನ್ನು ಅಹ್ವಾನಿಸಿ, ಸ್ವೀಕೃತಗೊಂಡ ಅರ್ಜಿಗಳನ್ನು ಪರಿಶೀಲಿಸಿ, ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಅಧ್ಯಕ್ಷರಾಗಿರುವ ಮತ್ತು ಅವರ ನೇತೃತ್ವದ ಜಿಲ್ಲಾ ಸಮಿತಿ ಮುಂದೆ ಪ್ರಸ್ತಾವನೆಯನ್ನು ಮಂಡಿಸುತ್ತಾರೆ. ನಿಗಮವು ಫಲಾನುಭವಿಗೆ ಸಾಲವನ್ನು ಬಿಡುಗಡೆ ಮಾಡುವ ಸಲುವಾಗಿ ಜಿಲ್ಲಾ ಸಮಿತಿಯು ಆಯ್ಕೆ ಮಾಡಿದ ಫಲಾನುಭವಿಗಳ ಪಟ್ಟಿಯೊಂದಿಗೆ ಸಂಬಂಧಿಸಿದ ನಡವಳಿಯನ್ನು ಜಿಲ್ಲಾ ವ್ಯವಸ್ಥಾಪಕರು ನಿಗಮದ ಕೇಂದ್ರ ಕಛೇರಿಗೆ ಕಳುಹಿಸುತ್ತಾರೆ.

**ಸಾಲದ ಅರ್ಜಿ ಸಲ್ಲಿಸುವ ವಿಧಾನ**

ಸಾಲ ಪಡೆಯಬಯಸುವ ಅಲ್ಪಸಂಖ್ಯಾತ ಅರ್ಜಿದಾರರು ನಿಗದಿತ ನಮೂನೆಯಲ್ಲಿ ಸಾಲದ ಅರ್ಜಿಯನ್ನು ಅವರ ಭಾವಚಿತ್ರ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರದೊಂದಿಗೆ ಸಲ್ಲಿಸಬೇಕು. ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮವು ಅನುಮೋದಿಸಿದ ಯೋಜನೆಗಳಿಗಾಗಿ ಆಯಾ ಜಿಲ್ಲಾ ವ್ಯವಸ್ಥಾಪಕರು ಸಂದರ್ಶನ ಏರ್ಪಡಿಸಿ ಜಿಲ್ಲಾ ಸಮಿತಿ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುತ್ತಾರೆ. ಆಯ್ಕೆಯಾದ ನಂತರ, ನಿಗಮದ ಕೇಂದ್ರ ಕಛೇರಿಯು ಸೂಚಿಸಿರುವಂತೆ, ಜಿಲ್ಲಾ ವ್ಯವಸ್ಥಾಪಕರು ಫಲಾನುಭವಿಯ ದಾಖಲಾತಿಗಳನ್ನು ಜಿಲ್ಲಾ ಸಮಿತಿಯ ಶಿಫಾರಸ್ಸಿನೊಂದಿಗೆ ಸಾಲ ಬಿಡುಗಡೆ ಮಾಡಲು ಸಲ್ಲಿಸುತ್ತಾರೆ.

ಹಣಕಾಸಿನ ನೆರವು (ರೂ.ಲಕ್ಷಗಳಲ್ಲಿ)

| ವರ್ಷ | ಆಯವ್ಯಯ | ಗುರಿ | | ಸಾಧನೆ | |
|---|---|---|---|---|---|
| | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 2008–09 | 450.00 | 2220 | 450.00 | 2227 | 462.00 |
| 2009–10 | 350.00 | 1100 | 350.00 | 605 | 150.00 |
| 2010–11 | – | – | – | 90 | 37.94 |
| 2011–12 | – | – | – | 818 | 119.11 |
| 2012–13 | – | – | – | 100 | 48.79 |
| **ಒಟ್ಟು** | **800.00** | **3320** | **800.00** | **3840** | **817.84** |

**ನೆರೆ ಸಂತ್ರಸ್ತರಿಗೆ ಕಿರು ಸಾಲ ಯೋಜನೆ:**

**2010–11ನೇ ಸಾಲಿನಲ್ಲಿ ಉತ್ತರ ಕರ್ನಾಟಕದಲ್ಲಿ ನೆರೆ ಹಾವಳಿಯಿಂದ ಹಾನಿಯಾಗಿರುವ ಸಂತ್ರಸ್ತರಿಗೆ ನೆರವು ನೀಡಲು ಕಿರುಸಾಲ ಯೋಜನೆಯಡಿಯಲ್ಲಿ ಸಹಾಯ ಮಾಡುವಂತೆ ನಿರ್ಣಯ ತೆಗೆದುಕೊಂಡು 3090 ನೆರೆ ಸಂತ್ರಸ್ತ ಫಲನುಭವಿಗಳಿಗೆ ಕಿರು ಸಾಲ ಯೋಜನೆಯಡಿಯಲ್ಲಿ 309.00 ಲಕ್ಷಗಳ ಸಾಲ ಸೌಲಭ್ಯ ಒದಗಿಸಲಾಗಿದೆ.**

**ವೃತ್ತಿ ತರಬೇತಿ ಯೋಜನೆ:**

ವೃತ್ತಿ ತರಬೇತಿ ಯೋಜನೆಯಡಿಯಲ್ಲಿ 2010–11ನೇ ಸಾಲಿನಲ್ಲಿ ರೂ.107.46 ಲಕ್ಷಗಳ ವೆಚ್ಚದಲ್ಲಿ 2979 ಫಲಾನುಭವಿಗಳಿಗೆ ವಿವಿಧ ತರಬೇತಿಯನ್ನು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ವಾಹನಾ ಚಾಲನ ತರಬೇತಿ, ಸೀವಿಂಗ್ ಮೆಷಿನ್ ಆಪರೇಟರ್ಸ್ ತರಬೇತಿ, ರಿಟೇಲ್ ಸೇಲ್ಸ್ ತರಬೇತಿ, ಬ್ಯೂಟೀಷಿಯನ್ ತರಬೇತಿ, ಕಪ್ಯೂಟರ್ ಆಪರೇಟರ್ಸ್ ತರಬೇತಿ ನೀಡಲಾಗಿದೆ.

**ಸರ್ಕಾರವು, 2008–09 ರೂ.4670/– ಲಕ್ಷ, 2009–10 ರೂ.4145 ಲಕ್ಷಗಳನ್ನು 2010–11ನೇ ರೂ. 5600.00 ಲಕ್ಷಗಳ ಒಟ್ಟು 4415 ಲಕ್ಷಗಳನ್ನು ನಿಗಮಕ್ಕೆ ಬಿಡುಗಡೆ ಮಾಡಿದೆ.**

**ನಿಗಮವು 2008–09ನೇ ಸಾಲಿನಲ್ಲಿ 29729 ಫಲಾನುಭವಿಗಳಿಗೆ 4546.07 ಲಕ್ಷಗಳ ಸಾಲ ಸೌಲಭ್ಯ, 2009–10ನೇ ಸಾಲಿನಲ್ಲಿ 27137 ಫಲಾನುಭವಿಗಳಿಗೆ 4097.64 ಲಕ್ಷಗಳ ಸಾಲ ಸೌಲಭ್ಯ, 2010–11ನೇ ಸಾಲಿನಲ್ಲಿ 40524 ಫಲಾನುಭವಿಗಳಿಗೆ 6478.05 ಲಕ್ಷಗಳ ಸಾಲ ಸೌಲಭ್ಯ ಒದಗಿಸಿದೆ. ನಿಗಮದಿಂದ, ಕಳೆದ ಮೂರು ವರ್ಷಗಳಲ್ಲಿ ಒಟ್ಟು 100390 ಫಲಾನುಭವಿಗಳಿಗೆ 15121.76 ಲಕ್ಷಗಳ ಸಾಲ ಸೌಲಭ್ಯವನ್ನು ಸರ್ಮಪಕವಾಗಿ ಒದಗಿಸಲಾಗಿದೆ.**

## ಕರ್ನಾಟಕ ರಾಜ್ಯ ವಕ್ಫ್ ಮಂಡಳಿ

ಕರ್ನಾಟಕ ಸರ್ಕಾರದಿಂದ ರಾಜ್ಯದಲ್ಲಿರುವ ವಕ್ಫ್ ಸಂಸ್ಥೆಗಳ ವಾರ್ಷಿಕ ಆದಾಯ ರೂ. 2.00 ಲಕ್ಷಕ್ಕಿಂತ ಕಡಿಮೆಯಿರುವ ವಕ್ಫ್ ಸಂಸ್ಥೆಗಳಿಗೆ ನಿರ್ಮಾಣ, ದುರಸ್ತಿ ಹಾಗೂ ಜೀರ್ಣೋದ್ಧಾರಕ್ಕಾಗಿ ಸಹಾಯಾನುದಾನವನ್ನು ನೀಡಲಾಗುತ್ತಿದೆ. ಇದರ ಪೈಕಿ ಈದ್ಗಾ ಹಾಗೂ ಖಬರಸ್ತಾನಗಳಿಗೆ ಗೋಡೆ/ಬೇಲಿ ನಿರ್ಮಾಣಕಾರ್ಯ ಪ್ರಮುಖವಾಗಿರುತ್ತದೆ. ಮುಂದುವರಿದು ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲೂ ಸಹ ಹೊಸದಾಗಿ ಮಾಡಬೇಕಾದ ಮಸೀದಿಗಳಿಗೂ ಸಹ ಸಹಾಯಾನುದಾನ ನೀಡುವುದು ಮುಖ್ಯ ಉದ್ದೇಶವಾಗಿರುತ್ತದೆ.

ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಸಿಬ್ಬಂದಿಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| | |
|---|---|
| 1) ಮುಖ್ಯ ಕಾರ್ಯನಿರ್ವಹಣಾಧಿಕಾರಿ | 01 |
| 2) ಅಪರ ಮುಖ್ಯ ಕಾರ್ಯನಿರ್ವಹಣಾಧಿಕಾರಿ | 01 |
| 3) ಸಹಾಯಕ ಕಾರ್ಯದರ್ಶಿ (ಆಡಳಿತ) | 01 |
| 4) ಸಹಾಯಕ ಕಾರ್ಯದರ್ಶಿ (ಹಣಕಾಸು) | 01 |
| 5) ಲೆಕ್ಕ ಅಧೀಕ್ಷಕರು | 01 |
| 6) ಮುಖ್ಯ ಕಾನೂನು ಅಧಿಕಾರಿ | 01 |
| 7) ಕಾನೂನು ಅಧಿಕಾರಿ | 01 |
| 8) ಎಸ್ಟೇಟ್ ಅಧಿಕಾರಿ | 01 |
| 9) ಪ್ರಿಸೈಡಿಂಗ್ ಅಧಿಕಾರಿ | 01 |
| 10) ಸಹಾಯಕ ಎಸ್ಟೇಟ್ ಅಧಿಕಾರಿ | 01 |
| 11) ಮುಖ್ಯ ಲೆಕ್ಕಾಧಿಕಾರಿ | 01 |
| 12) ವಿಭಾಗೀಯ ವಕ್ಫ್ ಅಧಿಕಾರಿ | 01 |
| 13) ಪಿ.ಆರ್.ಓ. | 01 |

| | |
|---|---|
| 14) ಸಹಾಯಕ ಅಭಿಯಂತರು | 01 |
| 15) ಲೆಕ್ಕ ತನಿಖಾ ಅಧೀಕ್ಷಕರು | 01 |
| 16) ವ್ಯವಸ್ಥಾಪಕರು | 01 |
| 17) ವಕ್ಫ್ ಅಧಿಕಾರಿಗಳು | 31 |
| 18) ಕಿರಿಯ ಅಭಿಯಂತರು | 01 |
| 19) ಶೀಘ್ರಲಿಪಿಗಾರರು | 05 |
| 20) ಪ್ರಥಮ ದರ್ಜೆ ಸಹಾಯಕರು | 60 |
| 21) ದ್ವಿತೀಯ ದರ್ಜೆ ಸಹಾಯಕರು | 55 |
| 22) ಲೆಕ್ಕ ಪರಿಶೋಧಕರು | 10 |
| 23) ಕಸ್ಟಂ ಮೇಂಟೆನನ್ಸ್ ಎಕ್ಸಿಕ್ಯೂಟಿವ್ | 04 |
| 24) ಡೇಟಾ ಎಂಟ್ರಿ ಆಪರೇಟರ್ (ಡಿ.ಇ.ಓ) | 40 |
| 25) ವಾಹನ ಚಾಲಕರು | 06 |
| 26) ದಲಾಯತ್ | 53 |
| 27) ಪೌರ ಕಾರ್ಮಿಕ | 03 |
| 28) ವಾಚ್‌ಮೆನ್‌ಗಳು | 04 |
| 29) ಲಿಫ್ಟ್ ಆಪರೇಟರ್ | 01 |
| **ಒಟ್ಟು** | **289** |

ರಾಜ್ಯದ ಎಲ್ಲಾ 30 ಜಿಲ್ಲೆಗಳಲ್ಲಿ ಜಿಲ್ಲಾ ವಕ್ಫ್ ಕಛೇರಿಗಳು ಇರುತ್ತವೆ. ಜಿಲ್ಲಾ ವಕ್ಫ್ ಕಛೇರಿಗಳ ಮುಖ್ಯಸ್ಥರು ವಕ್ಫ್ ಅಧಿಕಾರಿಯಾಗಿರುತ್ತಾರೆ.

**ಆಯವ್ಯಯ-ಅನುದಾನದ ವಿವರ:**

ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ 2013-14ನೇ ಸಾಲಿನ ಆಯವ್ಯಯ ಅನುದಾನ ಬಿಡುಗಡೆ ಮತ್ತು ಮಾರ್ಚ್ 2014 ರವರೆಗೆ ವೆಚ್ಚದ ವಿವರ ಈ ಕೆಳಕಂಡಂತೆ ಇರುತ್ತದೆ.

**2013-14 ನೇ ಸಾಲಿಗೆ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಒದಗಿಸಿದ ಅನುದಾನ ಮತ್ತು ವೆಚ್ಚದ ವಿವರ**

**(ರೂ. ಲಕ್ಷಗಳಲ್ಲಿ)**

| ಕ್ರ. ಸಂ. | ಯೋಜನೆ ಹೆಸರು/ ಖಾತೆ ಸಂಖ್ಯೆ | ಆಯವ್ಯಯದಲ್ಲಿ ಮಂಜೂ ರಾದ ಮೊತ್ತ | ಬಿಡುಗಡೆ ಯಾದ ಮೊತ್ತ | ಖರ್ಚಾದ ಮೊತ್ತ | ಸರ್ಕಾರ ದಿಂದ ಬಿಡುಗಡೆ ಯಾದ ಮೊತ್ತ | ಷರಾ |
|---|---|---|---|---|---|---|
| 01 | ವಕ್ಫ್ ಸಂಸ್ಥೆಗಳ ರಿಪೇರಿ/ಜೀರ್ಣೋದ್ಧಾರ 2250-00-102-02-101 (Non Plan) | 825.00 | 825.00 | 481.66 | 825.00 | ಸರ್ಕಾರದಿಂದ ಬಿಡುಗಡೆಯಾದ ಅನುದಾನವನ್ನು ರಾಜ್ಯದ ವಿವಿಧ ವಕ್ಫ್ ಸಂಸ್ಥೆಗಳಿಗೆ ಮಂಜೂರು ಮಾಡಿ ಬಿಡುಗಡೆಗೊಳಿಸಲಾಗಿರುತ್ತದೆ. |
| 02 | ವಕ್ಫ್ ಆಸ್ತಿಗಳ ಸಂರಕ್ಷಣೆ 2225-03-800-22-059 (Plan) | 400.00 | 400.00 | 400.00 | 400.00 | ಸರ್ಕಾರದಿಂದ ಬಿಡುಗಡೆಯಾದ ಅನುದಾನ ಪೂರ್ಣವಾಗಿ ವೆಚ್ಚವಾಗಿರುತ್ತದೆ. |
| 03 | 2ನೇ ಹಂತದ ಸರ್ವೇಕಾರ್ಯ 2250-00-102-5-02-101 (Non Plan) | 100.00 | 75.00 | 24.55 | 75.00 | ಸರ್ಕಾರದಿಂದ ಬಿಡುಗಡೆಯಾದ ಅನುದಾನ ಭಾಗಶಃ ವೆಚ್ಚವಾಗಿದ್ದು, ಸರ್ವೆ ಕಾರ್ಯವು ಪ್ರಗತಿಯಲ್ಲಿರುತ್ತದೆ. |

| ಕ್ರ. ಸಂ. | ಯೋಜನೆ ಹೆಸರು/ ಖಾತೆ ಸಂಖ್ಯೆ | ಆಯವ್ಯಯದಲ್ಲಿ ಮಂಜೂ ರಾದ ಮೊತ್ತ | ಬಿಡುಗಡೆ ಯಾದ ಮೊತ್ತ | ಖರ್ಚಾದ ಮೊತ್ತ | ಸರ್ಕಾರ ದಿಂದ ಬಿಡುಗಡೆ ಯಾದ ಮೊತ್ತ | ಷರಾ |
|---|---|---|---|---|---|---|
| 04 | ದರ್ಗಾಗಳ ಅಭಿವೃದ್ಧಿಗಾಗಿ ವಿಶೇಷ ಅನುದಾನ 2225–03–001–0–03 (State Sector - Plan) | 113.34 | 85.00 | – | 85.00 | ಗುಲ್ಬರ್ಗದಲ್ಲಿರುವ ಸೈಯದ್ ಮೊಹಮದ್ ಗೇಸುದರಾಸ್ ಖ್ವಾಜಾ ಬಂದೇ ನವಾಜ್ ಸಂಶೋಧನಾ ಕೇಂದ್ರ ಮತ್ತು ಇತರೆ ವಕ್ಫ್ ಸಂಸ್ಥೆಗೆ ಅನುದಾನ ಮಂಜೂರು ಮಾಡಿದೆ. |
| 05 | ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ನಿರ್ವಾಹಣೆಗಾಗಿ ಸಹಾಯಾನುದಾನ 2250–00–102–5–02–101 (Non Plan) | 650.00 | 487.50 | 487.50 | 487.50 | ಸರ್ಕಾರದಿಂದ ಬಿಡುಗಡೆ ಯಾಗಿರುವ ಅನುದಾನ ಪೂರ್ಣವಾಗಿ ವೆಚ್ಚವಾಗಿರುತ್ತದೆ. |
| 06 | 2225–03–800–0–23–05 (Plan) ವೆಚ್ಚವಾಗಿರುತ್ತದೆ. ಪೇಶ್ ಇಮಾಮ್ ಮತ್ತು ಮೌಜ್ಜನ್‌ಗಳಿಗೆ ಗೌರವಧನ. | 200 | 200.00 | –– | –– | ರಾಜ್ಯದಲ್ಲಿ ಸುಮಾರು 6900 ಮೌಜ್ಜನ್ ಮತ್ತು ಪೇಶ್ ಇಮಾಮ್ ಗಳಿಗೆ ಗೌರವಧನ ನೀಡಲು ಅರ್ಜಿಗಳು ಬಂದಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ: MWD 98 WES 2013, ದಿನಾಂಕ: 21–05–2014 ರಲ್ಲಿ ಸರ್ಕಾರ ಹೊಸ ಯೋಜನೆ ರೂಪಿಸಿದ್ದು, ಅದರನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ. |

**ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳ ವಿವರ ಈ ಕೆಳಕಂಡಂತೆ ಇರುತ್ತದೆ.**

**1) ನಿರ್ವಹಣಾ ಅನುದಾನ:**

2013–14 ನೇ ಸಾಲಿನಲ್ಲಿ ಸರ್ಕಾರಿ ಸಿಬ್ಬಂದಿಗಳ ವೇತನ ಪಾವತಿಗಾಗಿ ರೂ. 650.00 ಲಕ್ಷ ಅನುದಾನ ಒದಗಿಸಿರುತ್ತದೆ. ಇದರಲ್ಲಿ ಮಾರ್ಚ್ 2014 ರವರೆಗೆ ರೂ. 487.50 ಲಕ್ಷಗಳು ಅನುದಾನ ಬಿಡುಗಡೆ ಮಾಡಲಾಗಿತ್ತದೆ. ಈ ಅನುದಾನವನ್ನು ಸಿಬ್ಬಂದಿ ವೇತನ ವೆಚ್ಚ ಭರಿಸಲು ಪೂರ್ಣವಾಗಿ ಖರ್ಚು ಮಾಡಲಾಗಿದೆ.

**2) ವಕ್ಫ್ ಸಂಸ್ಥೆಗಳ ಸಹಾಯಾನುದಾನ:**

ಕರ್ನಾಟಕ ರಾಜ್ಯದಲ್ಲಿರುವ ಸಂಸ್ಥೆಗಳ ರಿಪೇರಿ, ಜೀರ್ಣೋದ್ಧಾರ ಯೋಜನೆಯಲ್ಲಿ ಸರಕಾರವು 2013–14 ನೇ ಸಾಲಿಗೆ ಆಯವ್ಯಯದಲ್ಲಿ ರೂ.1100–00 ಲಕ್ಷಗಳನ್ನು ನಿಗಧಿಪಡಿಸಿದ್ದು ಅದರ ಪೈಕಿ ಮಾರ್ಚ್ 2014 ಅಂತ್ಯದವರೆಗೆ ರೂ. 825.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಅದರಲ್ಲಿ ರಾಜ್ಯದ ವಿವಿಧ ವಕ್ಫ್ ಸಂಸ್ಥೆಗಳಿಗೆ ರಿಪೇರಿ ಹಾಗೂ ಜೀರ್ಣೋದ್ದಾರಕ್ಕಾಗಿ ರೂ. 481.66 ಲಕ್ಷಗಳನ್ನು ಖರ್ಚು ಮಾಡಲಾಗಿದೆ.

**3) ವಕ್ಫ್ ಆಸ್ತಿಗಳ ಸಂರಕ್ಷಣೆ:**

ವಕ್ಫ್ ಆಸ್ತಿಗಳನ್ನು ಸಂರಕ್ಷಣೆ ಮಾಡಲು ಸರ್ಕಾರವು 13–14 ನೇ ಸಾಲಿಗೆ ರೂ. 400.00 ಲಕ್ಷಗಳನ್ನು ಮಂಜೂರು ಮಾಡಿ, ರೂ. 400.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಈ ಪೈಕಿ ರಾಜ್ಯದಲ್ಲಿರುವ ವಿವಿಧ ವಕ್ಫ್ ಆಸ್ತಿಗಳನ್ನು ಸಂರಕ್ಷಣೆ ಮಾಡಲು ರೂ. 400–00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಿದೆ.

**4) ಎರಡನೇ ಸರ್ವೆ ಕಾರ್ಯಕ್ಕೆ ಸಹಾಯಾನುದಾನ:**

ರಾಜ್ಯದ 2ನೇ ಸರ್ವೇ ಕಾರ್ಯಕ್ಕೆ ಸರ್ಕಾರ 2013–14ನೇ ಸಾಲಿಗೆ ರೂ. 100.00 ಲಕ್ಷಗಳನ್ನು ಮಂಜೂರು ಮಾಡಿ ರೂ. 75.00 ಲಕ್ಷ ಬಿಡುಗಡೆ ಮಾಡಿದ್ದು, 2ನೇ ಹಂತದ ವಕ್ಫ್ ಸ್ವತ್ತುಗಳ ಸರ್ವೇಯಲ್ಲಿ ಸರ್ವೆ ಆಗಬೇಕಾದ ಸ್ವತ್ತುಗಳು 33,420 ಇದರಲ್ಲಿ ಸರ್ವೆ ಆಗಿರುವ ಸ್ವತ್ತುಗಳು 19,800 ವಕ್ಫ್ ಸ್ವತ್ತುಗಳ ಸರ್ವೆಕಾರ್ಯ ಮಾರ್ಚ್ 2014ಕ್ಕೆ ಆಗಿದ್ದು ಪ್ರಸ್ತುತ 2013–14ನೇ ಸಾಲಿನಲ್ಲಿ 4,797 ವಕ್ಫ್ ಸ್ವತ್ತುಗಳು ಸರ್ವೆ ಆಗಿರುತ್ತದೆ.

**5) ವಿಶೇಷ ಅಭಿವೃದ್ಧಿ:**

2013–14ನೇ ಸಾಲಿಗೆ ಸರ್ಕಾರ ದರ್ಗಾಗಳ ವಿಶೇಷ ಅಭಿವೃದ್ಧಿಗಾಗಿ ರೂ. 113.34 ಲಕ್ಷಗಳು ಅನುದಾನ ಒದಗಿಸಿರುತ್ತದೆ. ಇದರ ಪೈಕಿ ರೂ. 85.00 ಲಕ್ಷಗಳು ಬಿಡುಗಡೆಯಾಗಿರುತ್ತದೆ. ಗುಲ್ಬರ್ಗದಲ್ಲಿರುವ ಸೈಯದ್ ಮೊಹಮದ್ ಗೇಸುದರಾಸ್ ಖ್ವಾಜಾ ಬಂದೇ ನವಾಜ್ ಸಂಶೋಧನಾ ಕೇಂದ್ರ ಮತ್ತು ಇತರೆ ವಕ್ಫ್ ಸಂಸ್ಥೆಗೆ ಅನುದಾನ ಮಂಜೂರು ಮಾಡಿದೆ.

**6) ಪೇಶ್ ಇಮಾಮ್ ಮತ್ತು ಮೌಝ್ಝನ್‌ಗಳಿಗೆ ಗೌರವಧನ:**

ವಕ್ಫ್ ಸಂಸ್ಥೆಗಳಲ್ಲಿರುವ ಪೇಶ್ ಇಮಾಮ್ ಮತ್ತು ಮೌಜನ್ಸ್ ರವರಿಗೆ ಗೌರವಧನವನ್ನು ನೀಡಲು ಸರ್ಕಾರವು 2013–14 ನೇ ಸಾಲಿಗೆ ರೂ. 200–00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಸರ್ಕಾರದ ಆದೇಶ ಸಂಖ್ಯೆ: MWD 98 WES 2013, ದಿನಾಂಕ: 21–05–2014 ರಲ್ಲಿ ಸರ್ಕಾರ ಹೊಸ ಯೋಜನೆ ರೂಪಿಸಿದ್ದು, ಅದರನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ.

**7) ವಕ್ಫ್ ಸಂಸ್ಥೆಗಳ ಮಾಹಿತಿ ಗಣಕೀಕೃತಗೊಳಿಸುವ ಕಾರ್ಯ:**

ಕೇಂದ್ರ ಸರ್ಕಾರದ ಯೋಜನೆಯಲ್ಲಿ ಕರ್ನಾಟಕ ವಕ್ಫ್ ಮಂಡಳಿಗೆ ಸಂಬಂಧಿಸಿದ ಎಲ್ಲಾ ಮಾಹಿತಿಗಳನ್ನು ಗಣಕೀಕೃತಗೊಳಿಸುವ ಯೋಜನೆಯು ಪ್ರಗತಿಯಲ್ಲಿದೆ ಒಟ್ಟು 28584 ಆಸ್ತಿಗಳಲ್ಲಿ 19480 ಆಸ್ತಿಗಳನ್ನು ಗಣಕೀಕೃತಗೊಳಿಸಲಾಗಿದೆ.

**ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತು**

ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತನ್ನು ಕೇಂದ್ರದ ವಕ್ಫ್ ಪರಿಷತ್ತು ಮಾದರಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: RD 06 WGA 1991, ದಿನಾಂಕ: 27.03.1992ರನ್ವಯ ಸ್ಥಾಪಿಸಲಾಯಿತು.

ರಾಜ್ಯದಲ್ಲಿರುವ ವಕ್ಫ್ ಸಂಸ್ಥೆಗಳ ಅಭಿವೃದ್ಧಿಗಾಗಿ ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತು ವತಿಯಿಂದ ಕಮರ್ಷಿಯಲ್/ಶಾಪಿಂಗ್ ಕಾಂಪ್ಲೆಕ್ಸ್/ಶಾದಿಮಹಲ್/ಹಾಸ್ಟೆಲ್ ಕಟ್ಟಡಗಳನ್ನು ಕಟ್ಟಲು ಸಾಲ ಮಂಜೂರು ಮಾಡಲಾಗುವುದು. ಸದರಿ ಸಾಲವನ್ನು ಯೋಜನೆಯ ಶೇ. 75ರಷ್ಟು ಹಾಗೂ ಗರಿಷ್ಠ ರೂ. 50.00 ಲಕ್ಷ ಸಾಲವನ್ನು 2–4 ಕಂತುಗಳಲ್ಲಿ ಕಟ್ಟಡದ ಕಾಮಗಾರಿ ಪ್ರಗತಿಯ ಬಗ್ಗೆ ತಪಾಸಣೆ/ಬಳಕೆ ಪ್ರಮಾಣ ಪತ್ರ ಹಾಗೂ ಯೋಜನೆಯ ಭಾವಚಿತ್ರಗಳ ಆಧಾರದ ಮೇಲೆ ಬಿಡುಗಡೆ ಮಾಡಲಾಗುವುದು.

ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಲ್ಲಿ ನೋಂದಾಯಿತ ವಕ್ಫ್ ಸಂಸ್ಥೆಗಳು ಶಾದಿಮಹಲ್/ ಕಮರ್ಷಿಯಲ್/ಶಾಪಿಂಗ್ ಕಟ್ಟಡವನ್ನು ಕಟ್ಟಲು ಸಾಲವನ್ನು ಪಡೆಯಲು ಅರ್ಹತೆಯನ್ನು ಹೊಂದಿರುತ್ತಾರೆ.

ಸದರಿ ಸಾಲವನ್ನು ಶೇ. 5ರಷ್ಟು ವೆಲ್‌ಫೇರ್ ಸೆಸ್‌ನೊಂದಿಗೆ ಕಟ್ಟಡ ಕಾಮಗಾರಿ ಮುಗಿದ 2 ವರ್ಷಗಳ ನಂತರ 5–10 ವರ್ಷಗಳ ಅವಧಿಯಲ್ಲಿ ಮರುಪಾವತಿ ಮಾಡಬೇಕಾಗುತ್ತದೆ.

ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತ್ ಯೋಜನೆಯ ನಿರ್ವಹಣೆಗಾಗಿ ಸರ್ಕಾರವು 11 ಸದಸ್ಯರ ಸಮಿತಿಯನ್ನು ರಚಿಸಿದ್ದು ಇದರಲ್ಲಿ ಮಾನ್ಯ ಹಜ್ ಮತ್ತು ವಕ್ಫ್ ಸಚಿವರು ಅಧ್ಯಕ್ಷರಾಗಿದ್ದು, 3 ವರ್ಷಗಳ ಅವಧಿಯಂತೆ ಆಯ್ಕೆಗೊಂಡಿರುತ್ತಾರೆ. ಪ್ರಸ್ತುತ ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತಿನ ಅವಧಿಯು ದಿನಾಂಕ: 22–10–2011ಕ್ಕೆ ಮುಕ್ತಾಯಗೊಂಡಿದ್ದು, ಹೊಸ ಸಮಿತಿಯು ಅಸ್ತಿತ್ವಕ್ಕೆ ಬಂದಿರುತ್ತದೆ.

**ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದ ಹೊಸ ಯೋಜನೆಗಳು**

ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದಿಂದ ಅನುಷ್ಠಾನಗೊಳಿಸಲಾಗುತ್ತಿರುವ ಹೊಸ ಯೋಜನೆಗಳು ಕೆಳಕಂಡಂತಿವೆ:

**1) ಮುಸ್ಲಿಂ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ ಮಂಜೂರಾತಿ:**

ರಾಜ್ಯಾದ್ಯಂತ ಪ್ರೊಫೆಸನಲ್ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿನಿಯರಿಗೆ ಪ್ರತಿ ವರ್ಷ ಈ ಕೆಳಕಂಡಂತೆ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದೆ.

| ಕ್ರ.ಸಂ | ಕೋರ್ಸ್ | ವಿದ್ಯಾರ್ಥಿಗಳ ಸಂಖ್ಯೆ | ಪ್ರತಿ ವಿದ್ಯಾರ್ಥಿಗೆ ಮಂಜೂರಾದ ಮೊತ್ತ | ಮಂಜೂರಾದ ಒಟ್ಟು ಮೊತ್ತ |
|---|---|---|---|---|
| 1 | MBBS | 48 | 20000 | 9,60,000 |
| 2 | BDS | 66 | 15000 | 9,90,000 |
| 3 | BUMS | 95 | 10000 | 9,50,000 |
| 4 | BHMS | 54 | 10000 | 5,40,000 |
| 5 | BAMS | 45 | 10000 | 4,50,000 |
| 6 | BE | 980 | 10000 | 98,00,000 |
| 7 | MBA | 96 | 10000 | 9,60,000 |
| 8 | MCA | 39 | 10000 | 3,90,000 |
| 9 | M. Tech | 84 | 10000 | 8,40,000 |
| 10 | BCA | 149 | 5000 | 7,45,000 |
| 11 | BBM | 225 | 5000 | 11,25,000 |
| 12 | BBA | 19 | 5000 | 95,000 |

| ಕ್ರಸಂ | ಕೋರ್ಸ್ | ವಿದ್ಯಾರ್ಥಿಗಳ ಸಂಖ್ಯೆ | ಪ್ರತಿ ವಿದ್ಯಾರ್ಥಿಗೆ ಮಂಜೂರಾದ ಮೊತ್ತ | ಮಂಜೂರಾದ ಒಟ್ಟು ಮೊತ್ತ |
|---|---|---|---|---|
| 13 | NURSING | 21 | 5000 | 1,05,000 |
| 14 | B.PHARMA | 76 | 5000 | 3,80,000 |
| 15 | B.Sc., Agri./Hort./Vet. | 19 | 5000 | 95,000 |
| | ಒಟ್ಟು | **2016** | | **1,84,25,000** |

**2) ಟೈಲರಿಂಗ್ ತರಬೇತಿ ನೀಡುತ್ತಿರುವ ಸಂಘ ಸಂಸ್ಥೆಗಳಿಗೆ ಅನುದಾನ:**

ಪ್ರತಿ ದಿನ ಎರಡು ಬ್ಯಾಚ್‌ಗಳಲ್ಲಿ 25–30 ಮುಸ್ಲಿಂ ಮಹಿಳೆಯರಿಗೆ ಟೈಲರಿಂಗ್ ತರಬೇತಿ ನೀಡುತ್ತಿರುವ ನೋಂದಾಯಿತ ಸಂಘ ಸಂಸ್ಥೆಗಳಿಗೆ, ಟೈಲರಿಂಗ್ ತರಬೇತಿ ನೀಡುತ್ತಿರುವ ಶಿಕ್ಷಕಿಯರಿಗೆ ಪ್ರತಿ ತಿಂಗಳು ರೂ. 3,500/– ಹಾಗೂ ಸಹಾಯಕ ಟೈಲರಿಂಗ್ ತರಬೇತಿ ಶಿಕ್ಷಕಿಯರಿಗೆ ಪ್ರತಿ ತಿಂಗಳು ರೂ. 2,000/–ರಂತೆ ಗೌರವಧನವನ್ನು 6 ತಿಂಗಳವರೆಗೆ ಮಾತ್ರ ಮಂಜೂರು ಮಾಡಲಾಗುತ್ತದೆ.

**3) ಅಲ್ಪಸಂಖ್ಯಾತರ ಮುಸ್ಲಿಂ ಮಹಿಳಾ ಮತ್ತು ಹೆಣ್ಣು ಮಕ್ಕಳಿಗೆ ಆರೋಗ್ಯ ಪರಿಹಾರ ನಿಧಿ:**

ಈ ಯೋಜನೆಯಡಿಯಲ್ಲಿ ಬಿ.ಪಿ.ಎಲ್. ಕಾರ್ಡ್ ಹೊಂದಿರುವ ಬಡಕುಟುಂಬದವರಿಗೆ ಮತ್ತು ವಾರ್ಷಿಕ ಆದಾಯ ರೂ. 1,20,000/–ಕ್ಕಿಂತ ಕಡಿಮೆ ಇದ್ದು, ಹೃದಯ, ನರರೋಗ, ಕಿಡ್ನಿ, ಮೆದುಳು, ಕ್ಯಾನ್ಸರ್, ಟಿ.ಬಿ. ಸುಟ್ಟ ಗಾಯಗಳು, ಪಾಲಿಟ್ರಮ್ (ಮೋಟಾರು ವಾಹನ ವಿಮೆಯಡಿ ಒಳಗೊಂಡ ಪ್ರಕರಣಗಳನ್ನು ಹೊರತುಪಡಿಸಿ), ನಿಯೋ–ನಾಟಲ್ (ನವಜಾತ ಶಿಶುಗಳ ಖಾಯಿಲೆ)ಗಳು, ಬ್ರೈನ್ ಟ್ಯೂಮರ್ ಹಾಗೂ ಮಾರಕ ಖಾಯಿಲೆಗಳಿಂದ ಬಳಲುತ್ತಿರುವ ಅಲ್ಪಸಂಖ್ಯಾತ ಮುಸ್ಲಿಂ ಮಹಿಳೆಯರಿಗೆ ಹಾಗೂ ಹೆಣ್ಣು ಮಕ್ಕಳಿಗೆ ದೊಡ್ಡ ಪ್ರಮಾಣದ ಶಸ್ತ್ರ ಚಿಕಿತ್ಸೆಗೆ ಒಳಪಟ್ಟಿರುವಂತಹ ರೋಗಿಗಳಿಗೆ ರೂ. 5000/–ಗಳಿಂದ ರೂ. 1.00 ಲಕ್ಷಗಳ ವರೆಗೆ ಪರಿಹಾರವನ್ನು ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದಿಂದ ಈ ಕೆಳಕಾಣಿಸಿದ ನಿಬಂಧನೆಗಳನ್ನು ಪಾಲಿಸಿ ನೀಡಲಾಗುವುದು.

1) ಈ ಯೋಜನೆಯು ಅಲ್ಪಸಂಖ್ಯಾತರ ಮುಸ್ಲಿಂ ಮಹಿಳೆಯರಿಗೆ ಹಾಗೂ ಹೆಣ್ಣು ಮಕ್ಕಳಿಗೆ ಮಾತ್ರ ಅನ್ವಯಿಸುವುದು.
2) ಆದಾಯ ತೆರಿಗೆ ಪಾವತಿಸುವ ಹಾಗೂ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತುಸಾರ್ವಜನಿಕ ವಲಯ ಉದ್ಯಮೆಗಳಲ್ಲಿ ಕಾರ್ಯನಿರ್ವಹಿಸುವ ವ್ಯಕ್ತಿಯ ಕುಟುಂಬಕ್ಕೆ ಈ ಯೋಜನೆ ಅನ್ವಯಿಸುವುದಿಲ್ಲ.
3) ಅರ್ಜಿದಾರರು ಆರೋಗ್ಯ ಪರಿಹಾರ ನಿಧಿಯ ನಿಗಧಿತ ಅರ್ಜಿ ನಮೂನೆಯೊಂದಿಗೆ ಸಂಬಂಧ ಪಟ್ಟ ತಹಶೀಲ್ದಾರರು ನೀಡಿರುವ ಆದಾಯ ಪ್ರಮಾಣ ಪತ್ರದೊಂದಿಗೆ ಅಥವಾ ಕುಟುಂಬದ ಬಿ.ಪಿ.ಎಲ್. ಹಾಗೂ ಅಂತ್ಯೋದಯ ಪಡಿತರ ಚೀಟಿಯ ದೃಢೀಕೃತ ಜೆರಾಕ್ಸ್ ಪ್ರತಿಯೊಂದಿಗೆ ಸರ್ಕಾರದ ಅಧಿಕೃತವಾದ ಹಾಗೂ ಮಾನ್ಯತೆ ಪಡೆದ ಯಾವುದೇ ಆಸ್ಪತ್ರೆ ನರ್ಸಿಂಗ್ ಹೋಮ್‌ರವರು ನೀಡಿರುವ ಮೂಲ ಅಂದಾಜು ಪಟ್ಟಿ /Discharge Summary ಮತ್ತು ಆಸ್ಪತ್ರೆಗೆ ಪಾವತಿಸಿರುವ ಮೂಲ ಬಿಲ್ಲುಗಳೊಂದಿಗೆ ಸಲ್ಲಿಸತಕ್ಕದ್ದು.
4) ಅರ್ಜಿಯನ್ನು ರೋಗಿ ಅಥವಾ ಅವರ ಗಂಡ/ಪೋಷಕರು ಮಾತ್ರ ಸಲ್ಲಿಸತಕ್ಕದ್ದು.
5) ಅರ್ಹವಿರುವ ರೋಗಿಯು ಆಸ್ಪತ್ರೆ ಖರ್ಚನ್ನು ಸ್ವತಃ ಭರಿಸಿ ಬಿಡುಗಡೆಯಾಗಿದ್ದಲ್ಲಿ ನೇರವಾಗಿ ರೋಗಿಗೆ ಚೆಕ್ ಮೂಲಕ ಸಂಬಂಧ ಪಟ್ಟ ತಹಶೀಲ್ದಾರರ ಮುಖೇನ ನೀಡುವುದು.
6) ಅನುದಾನ ಪಡೆಯಲು ಆಸ್ಪತ್ರೆಯಿಂದ ಡಿಸ್‌ಚಾರ್ಜ್ ಆದ ಮೂರು ತಿಂಗಳ ಒಳಗಾಗಿ ಅರ್ಜಿಯನ್ನು ಸಲ್ಲಿಸಬೇಕು.
7) ರೋಗಿಗೆ ಒಂದು ಬಾರಿ ಮಾತ್ರ ಆರೋಗ್ಯ ಪರಿಹಾರ ಮಂಜೂರು ಮಾಡಲಾಗುವುದು.

**4) ಸರ್ಕಾರೇತರ ಸಂಸ್ಥೆಗಳಿಂದ ಮುಸ್ಲಿಂ ಮಕ್ಕಳ ಪೂರ್ವ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸುವುದು:**

ಸರ್ಕಾರಿ ಉರ್ದು ಪ್ರಾಥಮಿಕ ಶಾಲೆಗಳ ಸಮೀಪದಲ್ಲಿ/ಎಲ್ಲಿ ಪೂರ್ವ ಪ್ರಾಥಮಿಕ ಶಾಲೆಗಳ ಅವಶ್ಯಕತೆ ಇದೆಯೋ ಅಲ್ಲಿ ಇಂತಹ ಶಾಲೆಗಳನ್ನು ಸರ್ಕಾರೇತರ ಸಂಸ್ಥೆಗಳು ಸ್ಥಾಪಿಸಿದ್ದಲ್ಲಿ, ಸಂಸ್ಥೆಯ ಮೂಲಕ ಉಪಧ್ಯಾಯಿನಿಗೆ ತಿಂಗಳಿಗೆ ರೂ. 3000/– ಮತ್ತು ಸಹಾಯಕಿಗೆ ರೂ. 2000/–ಗಳ ಸಹಾಯಧನವನ್ನು ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನದಿಂದ ನೀಡಲಾಗುವುದು.

**5) ಅಲ್ಪಸಂಖ್ಯಾತರ ಮುಸ್ಲಿಂ ಮಹಿಳೆಯರಿಗೆ ಗಣಕಯಂತ್ರ ತರಬೇತಿ:**

ಈ ಯೋಜನೆಯಡಿಯಲ್ಲಿ ಮುಸ್ಲಿಂ ಹೆಣ್ಣು ಮಕ್ಕಳಿಗೆ ಉಚಿತವಾಗಿ 6 ತಿಂಗಳ ಕಂಪ್ಯೂಟ್ ತರಬೇತಿಯನ್ನು ನೀಡುವ, ಮೂಲಭೂತ ಸೌಕರ್ಯ ಹೊಂದಿರುವಂತಹ ಸರ್ಕಾರೇತರ ವಿದ್ಯಾಸಂಸ್ಥೆಗಳಿಗೆ ಗೌರವಧನ ನೀಡುವ ಮೂಲಕ ಸಹಾಯವನ್ನು ಮಾಡಲಾಗುವುದು.

**6) ಉರ್ದು ಡಿಟಿಪಿ ಕೋರ್ಸ್ ಕಲಿಯುತ್ತಿರುವ ಅಲ್ಪಸಂಖ್ಯಾತರ ಮುಸ್ಲಿಂ ಹೆಣ್ಣು ಮಕ್ಕಳಿಗೆ ಶಿಷ್ಯವೇತನ:**

ಸಂಸ್ಥೆಗಳಲ್ಲಿ ಕನಿಷ್ಠ ಆರು ತಿಂಗಳ ಅವಧಿಯ ಉರ್ದು ಡಿಟಿಪಿ ಕೋರ್ಸ್ ಕಲಿಯುತ್ತಿರುವ ಮುಸ್ಲಿಂ ಹೆಣ್ಣು ಮಕ್ಕಳಿಗೆ ಪ್ರತಿಷ್ಠಾನದಿಂದ ರೂ. 2,000/–ಗಳ ಶಿಷ್ಯವೇತನವನ್ನು ಸರ್ಕಾರೇತರ ಸಂಸ್ಥೆಗಳ ಮುಖಾಂತರ ನೀಡಲಾಗುವುದು.

## ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ

### ಸಿಬ್ಬಂದಿ ವಿವರ

| ಕ್ರಮ ಸಂಖ್ಯೆ | ಹುದ್ದೆಗಳು | ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಅಧೀನ ಕಾರ್ಯದರ್ಶಿ | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕರು | 1 |
| 5 | ಸಹಾಯಕರು | 2 |
| 6 | ಕಿರಿಯ ಸಹಾಯಕರು | 1 |
| 7 | ಶೀಘ್ರಲಿಪಿಗಾರರು | 1 |
| 8 | ಬೆರಳಚ್ಚುಗಾರರು | 1 |
| 9 | ವಾಹನ ಚಾಲಕರು | 1 |
| 10 | ದಲಾಯತ್ | 2 |
| 11 | ಉಪ ನಿರ್ದೇಶಕರು (ಅಂಕಿ ಅಂಶಗಳು ಮತ್ತು ಸಂಶೋಧನೆ) | 1 |
| 12 | ಸಹಾಯಕ ಅಂಕಿ ಅಂಶಗಳು ಮತ್ತು ಸಂಶೋಧನಾಧಿಕಾರಿ | 2 |
| 13 | ಸಂಶೋಧನಾ ಮತ್ತು ಅಂಕಿಅಂಶಗಳ ನಿರೀಕ್ಷಕರು | 2 |
| 14 | ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು | 1 |
| 15 | ಸಹಕಾರ ಸಂಘಗಳ ಪರಿವೀಕ್ಷಕರು | 1 |
| | **ಒಟ್ಟು** | **19** |

### ಆಯೋಗದ ಹಣಕಾಸಿನ ಮೂಲ ಹಾಗೂ ಆಯವ್ಯಯ ಹಂಚಿಕೆ

2013–14ನೇ ಸಾಲಿನ ಆಯವ್ಯಯದಲ್ಲಿ ಆಯೋಗದ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗಾಗಿ ಯೋಜನೇತರ ಲೆಕ್ಕಶೀರ್ಷಿಕೆಯಲ್ಲಿ ರೂ. 150.00 ಲಕ್ಷಗಳ ಸಹಾಯಾನುಧನವನ್ನು ಒದಗಿಸಿ ಬಿಡುಗಡೆಗೊಳಿಸಲಾಗಿದೆ. ದಿನಾಂಕ: 20.06.2012 ರವರೆಗೆ ರೂ. 47.04 ಲಕ್ಷಗಳು ಖರ್ಚು ಮಾಡಲಾಗಿದೆ. ಖರ್ಚಿನ ವಿವರಗಳು ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಿವರಣೆ | ರೂ. |
|---|---|---|
| 1 | ವೇತನ ಭತ್ಯೆ ಅಧಿಕಾರಿ/ಸಿಬ್ಬಂದಿ | 1020000 |
| 2 | ಅಧ್ಯಕ್ಷರ ವೇತನ | 98140 |
| 3 | ಸಲಹಾ ಕೇಂದ್ರ ಸಿಬ್ಬಂದಿ ವೇತನ | 52800 |
| 4 | ಕಾನೂನು ಮತ್ತು ಸಲಹಾ ವೆಚ್ಚಗಳು | 90350 |
| 5 | ಪ್ರಯಾಣ ಭತ್ಯೆ (ಅಧ್ಯಕ್ಷರು) | 35820 |
| 6 | ಕಛೇರಿ ವೆಚ್ಚ | 96178 |
| 7 | ದೂರವಾಣಿ ವೆಚ್ಚ | 67195 |
| 8 | ವಿದ್ಯುತ್ ಶಕ್ತಿ | 92850 |
| 9 | ಇಂಧನ ವೆಚ್ಚ | 77072 |
| 10 | ವಾಹನ ದುರಸ್ತಿ ವೆಚ್ಚ | 28475 |
| 11 | ಮುದ್ರಣ ವೆಚ್ಚ | 26190 |

| ಕ್ರಮ ಸಂಖ್ಯೆ | ವಿವರಣೆ | ರೂ. |
|---|---|---|
| 12 | ಕಛೇರಿ ನವೀಕರಣ | 1980000 |
| 13 | ವಿಮಾನ ವೆಚ್ಚ | 106336 |
| 14 | ಸದಸ್ಯ ಪ್ರಯಾಣ ಭತ್ಯೆ | 17189 |
| 15 | ವೈದ್ಯಕೀಯ ವೆಚ್ಚದ ಮರುಪಾವತಿ | 552872 |
| 16 | ಕಛೇರಿಯ ಆಧುನೀಕರಣ | 363165 |
| 17 | ಜಾಹಿರಾತು ವೆಚ್ಚ | 52433 |
| 18 | ಮಾಜಿ ಸದಸ್ಯರುಗಳ ಬಾಕಿ | 46280 |
| | ಒಟ್ಟು** | **4904838** |

** ಈ ಖರ್ಚಾಗಿರುವ ಹಣದಲ್ಲಿ ಹಿಂದಿನ ವರ್ಷದ ಉಳಿದಿರುವ ಬಾಕಿ ಮತ್ತು ಖಜಾನೆಯಲ್ಲಿ ನಮ್ಮ ಖಾತೆಯಲ್ಲಿ ಉಳಿದಿರುವ ಬಾಕಿ ಹಣ ಹಾಗೂ ಸೇರ್ಪಡೆಯಾದ ಹಿಂದಿನ ವರ್ಷಗಳ ಬಡ್ಡಿಯು ಸಹ ಸೇರಿರುತ್ತದೆ.

ಆಯೋಗದಿಂದ ಯಾವುದೇ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುವುದಿಲ್ಲ. ಬದಲಾಗಿ ವಿವಿಧ ಇಲಾಖೆಗಳಲ್ಲಿ ಅಲ್ಪಸಂಖ್ಯಾತರಿಗೆ ದೊರೆಯುವ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.

## ಆಯೋಗದ ಚಟುವಟಿಕೆಗಳು

ಸರ್ಕಾರವು ರೂಪಿಸಿರುವ ಫಲಾನುಭವಿ ಆಧಾರಿತ ಯೋಜನೆಗಳ ಬಗ್ಗೆ ಅಲ್ಪಸಂಖ್ಯಾತರಿಗೆ ಸಾಕಷ್ಟು ಮಾಹಿತಿ ಇಲ್ಲದ ಕಾರಣದಿಂದಾಗಿ ಅಲ್ಪಸಂಖ್ಯಾತರು ಈ ಯೋಜನೆಗಳನ್ನು ನಿರೀಕ್ಷಿತ ಮಟ್ಟದಲ್ಲಿ ಬಳಸಿಕೊಂಡಿಲ್ಲವೆಂಬುದನ್ನು ಗಮನಿಸಲಾಗಿದೆ. ಮಾರ್ಚ್ 2011ರಲ್ಲಿ ನವದೆಹಲಿಯಲ್ಲಿ ನಡೆದ ವಿವಿಧ ರಾಜ್ಯಗಳ ಅಲ್ಪಸಂಖ್ಯಾತರ ಆಯೋಗಗಳ ಸಭೆಯಲ್ಲಿ ಸಂಬಂಧಪಟ್ಟ ರಾಜ್ಯ ಸರ್ಕಾರಗಳ ಕಾರ್ಯಕ್ರಮಗಳನ್ನು ಸ್ಥಳೀಯ ಭಾಷೆ ಮತ್ತು ಅಲ್ಪಸಂಖ್ಯಾತರ ಭಾಷೆಯಲ್ಲಿ ಪ್ರಚಾರ ಮಾಡಲು ತೀರ್ಮಾನಿಸಿರುತ್ತಾರೆ. ಈ ದೆಸೆಯಲ್ಲಿ ವಿವಿಧ ಇಲಾಖೆಗಳಿಂದ ಅಲ್ಪಸಂಖ್ಯಾತರಿಗೆ ಲಭ್ಯವಿರುವ ಸವಲತ್ತುಗಳ ವಿವರಗಳನ್ನು ಸಂಗ್ರಹಿಸಿ ಕನ್ನಡ, ಆಂಗ್ಲ ಮತ್ತು ಉರ್ದು ಭಾಷೆಯಲ್ಲಿ ಕೈಪಿಡಿಯ ಮಾದರಿಯಲ್ಲಿ ಆಯೋಗದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ. ಈ ಮಾಹಿತಿಯು ವೆಬ್‌ಸೈಟ್‌ನಲ್ಲಿ ಉಚಿತವಾಗಿ ಲಭ್ಯವಿರುತ್ತದೆ. ಹಾಗೂ ಈ ಮಾಹಿತಿಯನ್ನು ಪುಸ್ತಕಗಳು ಹಾಗೂ ಭಿತ್ತಿಪತ್ರಗಳು ಮತ್ತು ಫಲಕಗಳ ಮೂಲಕ ಪ್ರಕಟಿಸಲಾಗಿದೆ.

## ಜಿಲ್ಲಾ ಪರಿಶೀಲನಾ ಸಭೆಗಳು

ಆಯೋಗ 2013–14ನೇ ಸಾಲಿನಲ್ಲಿ ಐದು (5) ಜಿಲ್ಲೆಗಳಲ್ಲಿ ಪರಿಶೀಲನಾ ಸಭೆ ನಡೆಸಲಾಯಿತು. ಈ ಪರಿಶೀಲನಾ ಸಭೆಗಳಲ್ಲಿ ಜಿಲ್ಲಾ ಮಟ್ಟದಲ್ಲಿ ಅಲ್ಪಸಂಖ್ಯಾತರಿಗೆ ದೊರೆಯುವ ಸರ್ಕಾರದ ಸವಲತ್ತುಗಳ ಬಗ್ಗೆ ಪರಿಶೀಲಿಸಲಾಯಿತು ಹಾಗೂ ಕೊರತೆಗಳು ಕಂಡಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವಂತೆ ಶಿಫಾರಸ್ಸು ಮಾಡಲಾಗಿದೆ.

## ವಕ್ಫ್ ಸ್ವತ್ತುಗಳ ಪರಿಶೀಲನೆ

ರಾಜ್ಯದಲ್ಲಿ ವಕ್ಫ್ ಆಸ್ತಿಗಳ ದುರ್ಬಳಕೆ ಹಾಗೂ ಅನಧಿಕೃತ ಅತಿಕ್ರಮಣದ ಬಗ್ಗೆ ಪರಿಶೀಲಿಸಲಾಗಿದ್ದು, ಪ್ರಸ್ತುತ ಬೀದರ್ ಜಿಲ್ಲೆಯ ವಕ್ಫ್ ಆಸ್ತಿಗಳ ದುರ್ಬಳಕೆ ಹಾಗೂ ಅನಧಿಕೃತ ಅತಿಕ್ರಮಣದ ಬಗ್ಗೆ ಅಧ್ಯಯನ ಹಾಗೂ ಪರಿಶೀಲನೆ ಮಾಡಲಾಗಿದ್ದು, ಇದರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾಯಿದೆ–1994 ಕಲಂ 15ರಂತೆ ಆಯೋಗದ ಶಿಫಾರಸ್ಸಿನ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ಅಸಂಕಇ 99 ಡಬ್ಲ್ಯೂಇಎಸ್ 2012, ದಿನಾಂಕ: 04–06–2012ರನ್ವಯ ಕರ್ನಾಟಕ ಲೋಕಾಯುಕ್ತಕ್ಕೆ ವರದಿಯನ್ನು ಸಲ್ಲಿಸಲಾಗಿದೆ. ಈ ರೀತಿ ಸರ್ಕಾರವು ವಕ್ಫ್ ಸ್ವತ್ತುಗಳ ಅತಿಕ್ರಮಣ ಅಥವಾ ದುರ್ಬಳಕೆ ಆಗದಂತೆ ಕ್ರಮ ವಹಿಸುತ್ತಿದೆ. ಈ ನಿಟ್ಟಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ:MWD 26 WES 2013 ದಿನಾಂಕ: 08–05–2013 ದಲ್ಲಿ ರಾಜ್ಯ ಮಟ್ಟದಲ್ಲಿ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಮತ್ತು ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ವಕ್ಫ್ ಅಸ್ತಿಗಳನ್ನು ಸಂರಕ್ಷಿಸುವ ಬಗ್ಗೆ ಕಾರ್ಯಪಡೆ(ಟಾಸ್ಕ್ ಫೋರ್ಸ್) ಗಳನ್ನು ರಚಿಸಲಾಗಿರುತ್ತದೆ.

## ಕೋಮು ಸೌಹಾರ್ದತೆ

ಆಯೋಗವು ರಾಜ್ಯದಲ್ಲಿ ಕೋಮು ಸಾಮರಸ್ಯವನ್ನು ಸ್ಥಾಪಿಸಲು ನಿರಂತರವಾಗಿ ಶ್ರಮಿಸುತ್ತಿದೆ. ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಹಾಗೂ ಪೊಲೀಸ್ ವರಿಷ್ಠಾಧಿಕಾರಿಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡು ಕೋಮು ಲಗಭೆಯಂತಹ ಅಹಿತಕರ ಘಟನೆಗಳು ನಡೆಯದಂತೆ ಕ್ರಮ ವಹಿಸಲಾಗುತ್ತಿದೆ.

## ಪ್ರಧಾನ ಮಂತ್ರಿಗಳ 15 ಅಂಶಗಳ ಕಾರ್ಯಕ್ರಮ

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪ್ರಧಾನ ಮಂತ್ರಿಗಳ 15 ಅಂಶದ ಕಾರ್ಯಕ್ರಮದ ಅನುಷ್ಠಾನದ ರಾಜ್ಯ ಮಟ್ಟ ಮತ್ತು ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿ ರಚಿಸಲಾಗಿದೆ. 8 ಜಿಲ್ಲಾ ಮಟ್ಟದ ಸಮಿತಿ ಸಭೆಗಳನ್ನು ನಡೆಸಲಾಗಿದೆ.

**ಅಲ್ಪಸಂಖ್ಯಾತರ ಕಲ್ಯಾಣಕ್ಕಾಗಿ ಪ್ರಧಾನಮಂತ್ರಿಗಳ ಹೊಸ 15 ಅಂಶ ಕಾರ್ಯಕ್ರಮಗಳಲ್ಲಿ ಅಲ್ಪಸಂಖ್ಯಾತರ ಕಲ್ಯಾಣಕ್ಕಾಗಿ ಕೆಲವೊಂದು ಕ್ರಮಗಳನ್ನು ಕೈಗೊಳ್ಳಲಾಗಿದೆ. ಕಾರ್ಯಕ್ರಮಗಳ ವೈಶಿಷ್ಟ್ಯತೆಗಳು ಈ ಕೆಳಗಿನಂತಿವೆ:**

**1) ಐಸಿಡಿಎಸ್ ಸೇವೆಗಳು ಸರಿ–ಸಮಾನವಾಗಿ ಲಭ್ಯವಿರುವಂತೆ ಮಾಡುವುದು.**

ಅಂಗನವಾಡಿ ಕೇಂದ್ರಗಳ ಕೆಲವೊಂದು ಶೇಕಡಾವಾರು ಕೇಂದ್ರಗಳನ್ನು ಅಲ್ಪಸಂಖ್ಯಾತ ಸಮುದಾಯದ ಜನರು ಅಧಿಕವಾಗಿ ವಾಸಿಸುತ್ತಿರುವ ತಾಲ್ಲೂಕುಗಳು ಮತ್ತು ಗ್ರಾಮಗಳಲ್ಲಿ ತೆರೆಯಲಾಗುವುದು. ಇದರಿಂದಾಗಿ ಯೋಜನೆಯ ಪ್ರಯೋಜನಗಳು ಅವರುಗಳಿಗೆ ನೇರವಾಗಿ ಸಿಗುತ್ತವೆ.

**2) ಶಾಲಾ–ಶಿಕ್ಷಣಗಳ ಲಭ್ಯತೆಗಳನ್ನು ಹೆಚ್ಚಿಸುವುದು**

ಸರ್ವಶಿಕ್ಷಾ ಅಭಿಯಾನ, ಕಸ್ತೂರ್ ಬಾ ಗಾಂಧಿ ಬಾಲಿಕಾ ವಿದ್ಯಾಲಯ ಯೋಜನೆ ಮತ್ತು ಇಂತಹುದೇ ಆದ ಸರಕಾರದ ಇತರ ಯೋಜನೆಗಳಲ್ಲಿ ಕೆಲವೊಂದು ಶೇಕಡಾವಾರು ಶಾಲೆಗಳನ್ನು ಅಲ್ಪಸಂಖ್ಯಾತರ ಜನಸಂಖ್ಯೆ ಸಾಕಷ್ಟಿರುವ ಹಳ್ಳಿಗಳು/ಪ್ರದೇಶಗಳಲ್ಲಿ ಸ್ಥಾಪಿಸಲಾಗುವುದು.

**3) ಉರ್ದು ಕಲಿಸುವುದಕ್ಕಾಗಿ ಹೆಚ್ಚಿನ ಸಂಪನ್ಮೂಲಗಳನ್ನು ಒದಗಿಸುವುದು.**

ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಉರ್ದು ಭಾಷೆ ಕಲಿಸುವ ಅಧ್ಯಾಪಕರನ್ನು ನೇಮಕ ಮಾಡಲು ಮತ್ತು ಅಧ್ಯಾಪಕ ಹುದ್ದೆಗಳ ಸಂಖ್ಯೆಗಳನ್ನು ಹೆಚ್ಚಿಸಲು ಕೇಂದ್ರದಿಂದ ಸಹಾಯವನ್ನು ಒದಗಿಸಲಾಗುವುದು.

**4) ಮದರಸ ಶಿಕ್ಷಣವನ್ನು ಆಧುನೀಕರಿಸಲಾಗುವುದು.**

ಪ್ರಾದೇಶಿಕ ಆಧಾರಿಕವಾದ ಮತ್ತು ಮದರಸಗಳನ್ನು ಆಧುನೀಕರಣಗೊಳಿಸುವ ಕಾರ್ಯಕ್ರಮಗಳನ್ನು ಬಲಪಡಿಸಲಾಗುವುದು ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲಾಗುವುದು.

**5) ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳನ್ನು ಒದಗಿಸುವುದು.**

ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿರುವ ವಿದ್ಯಾರ್ಥಿಗಳಿಗಾಗಿ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದಲ್ಲಿ ವಿದ್ಯಾರ್ಥಿ ವೇತನಗಳನ್ನು ನೀಡಲಾಗುವುದು.

**6) ಮೌಲಾನಾ ಅಜಾದ್ ಶಿಕ್ಷಣ ಸಂಸ್ಥಾಪನೆ ಮೂಲಕ ಶೈಕ್ಷಣಿಕ ಮೂಲ ರಚನಾ ಸೌಕರ್ಯಗಳನ್ನು ಸುಧಾರಿಸುವುದು.**

ಸಂಸ್ಥಾಪನೆಯನ್ನು ಬಲಪಡಿಸಲಾಗುವುದು ಮತ್ತು ಚಟುವಟಿಕೆಗಳನ್ನು ಹೆಚ್ಚಿಸಲಾಗುವುದು.

**7) ಬಡವರಿಗಾಗಿ ಸ್ವಂತ–ಉದ್ಯೋಗಾವಕಾಶ ಮತ್ತು ವೇತನ ತರುವ ಉದ್ಯೋಗಾವಕಾಶ ಕಾರ್ಯಕ್ರಮಗಳು.**

ಸ್ವರ್ಣ ಜಯಂತಿ ಗ್ರಾಮೀಣ ಸ್ವಂತ–ಉದ್ಯೋಗ ಯೋಜನೆ (ಎಸ್‌ಜಿಎಸ್‌ವೈ), ಸ್ವರ್ಣ ಜಯಂತಿ ನಗರ ಪ್ರದೇಶ ಸ್ವಂತ ಉದ್ಯೋಗ ಯೋಜನೆ (ಎಸ್‌ಜೆಎಸ್‌ಆರ್‌ವೈ), ಸಂಪೂರ್ಣ ಗ್ರಾಮೀಣ ಉದ್ಯೋಗಾವಕಾಶ ಯೋಜನೆ (ಎಸ್‌ಜಿಆರ್‌ವೈ) ಮೊದಲಾದ ಯೋಜನೆಗಳ ಮೂಲಕ ಅಲ್ಪಸಂಖ್ಯಾತರಿಗಾಗಿ ವಸ್ತು ರೂಪದ ಪ್ರಯೋಜನಗಳು ಮತ್ತು ಹಣಕಾಸು ವಿತರಣೆಯನ್ನು ತೆಗೆದಿರಿಸುವುದು.

**8) ತಾಂತ್ರಿಕ ತರಬೇತಿಯ ಮೂಲಕ ಕೌಶಲ್ಯತೆಗಳನ್ನು ಸುಧಾರಿಸುವುದು.**

ಹೊಸತಾಗಿ ಸ್ಥಾಪಿಸಲಾಗುವ ಐಟಿಐ ಸಂಸ್ಥೆಗಳಲ್ಲಿ ಕೆಲವೊಂದು ಶೇಕಡಾವಾರು ಪ್ರಮಾಣದ ಘಟಕಗಳನ್ನು ಅಲ್ಪಸಂಖ್ಯಾತ ಸಮುದಾಯದವರು ಹೆಚ್ಚಾಗಿರುವ ಪ್ರದೇಶಗಳಲ್ಲಿ ಸ್ಥಾಪಿಸುವುದು ಮತ್ತು ಆ ಪ್ರದೇಶಗಳಲ್ಲಿ ಈಗಿರುವ ಐಟಿಐ ಸಂಸ್ಥೆಗಳನ್ನು 'ಉತ್ಕೃಷ್ಟತೆಯ ಕೇಂದ್ರ'ಗಳನ್ನಾಗಿ ಪರಿವರ್ತಿಸುವಲ್ಲಿ ಹೆಚ್ಚಾಗಿ ಪರಿಗಣಿಸುವುದು.

**9) ಆರ್ಥಿಕ ಚಟುವಟಿಕೆಗಳಿಗಾಗಿ ಸಾಲ ಬೆಂಬಲಗಳನ್ನು ಹೆಚ್ಚಿಸುವುದು.**

ರಾಷ್ಟ್ರೀಯ ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ನಿಗಮವನ್ನು (ಎನ್‌ಎಮ್‌ಡಿಎಫ್‌ಸಿ) ಬಲಪಡಿಸುವುದು ಮತ್ತು ಖಾಸಗಿ ವಲಯದ ಬ್ಯಾಂಕ್ ಸಾಲಗಳಲ್ಲಿ ಕೆಲವೊಂದು ಶೇಕಡಾವಾರು ಪ್ರಮಾಣಗಳನ್ನು ಅಲ್ಪಸಂಖ್ಯಾತರಿಗಾಗಿ ತೆರೆದಿರಿಸುವುದು.

**10) ರಾಜ್ಯ ಮತ್ತು ಕೇಂದ್ರ ಸೇವೆಗಳಿಗಾಗಿ ನೇಮಕಾತಿಗಳು.**

ಕೇಂದ್ರ ಮತ್ತು ರಾಜ್ಯ ಪೊಲೀಸ್ ಪಡೆಗಳು, ರೈಲ್ವೆಗಳು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಸಾರ್ವಜನಿಕ ರಂಗದ ಉದ್ಯಮಗಳಲ್ಲಿ ಅಲ್ಪಸಂಖ್ಯಾತರಿಗೆ ಉದ್ಯೋಗಗಳನ್ನು ನೀಡುವ ಬಗ್ಗೆ ವಿಶೇಷವಾಗಿ ಪರಿಗಣಿಸಲಾಗುವುದು ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಕೋಚಿಂಗ್ ನೀಡುವುದಕ್ಕೆ ಸಂಬಂಧಿಸಿದಂತೆ ಅಲ್ಪಸಂಖ್ಯಾತ ಸಮುದಾಯದವರಿಗೆ ವಿಶೇಷವಾದ ಯೋಜನೆಗಳನ್ನು ರೂಪಿಸಲಾಗುವುದು.

**11) ಗ್ರಾಮೀಣ ವಸತಿ ಯೋಜನೆಗಳಲ್ಲಿ ಸರಿ–ಸಮಾನ ಪಾಲುಗಳು.**

ಇಂದಿರಾ ವಸತಿ ಯೋಜನೆಯಲ್ಲಿ ಕೆಲವೊಂದು ಪಾಲನ್ನು ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿರುವ ಬಡವರಿಗಾಗಿ ವಿಶೇಷವಾಗಿ ತೆಗೆದಿರಿಸಲಾಗುವುದು.

**12) ಅಲ್ಪಸಂಖ್ಯಾತರು ವಾಸಿಸುತ್ತಿರುವ ಕೊಳಚೆಗೇರಿ ಪ್ರದೇಶಗಳಲ್ಲಿನ ಜನ ಜೀವನ ಪರಿಸ್ಥಿತಿಯನ್ನು ಉತ್ತಮಗೊಳಿಸುವುದು.**

ಸಮಗ್ರ ವಸತಿ ಮತ್ತು ಕೊಳಚೆಗೇರಿ ಅಭಿವೃದ್ಧಿ ಕಾರ್ಯಕ್ರಮ (ಐಎಚ್‌ಎಸ್‌ಡಿಪಿ) ಮತ್ತು ಜವಾಹರ್‌ಲಾಲ್ ನೆಹರೂ ನಗರ ಪುನರ್ ನಿರ್ಮಾಣ ಕಾರ್ಯಕ್ರಮ (ಜೆಎನ್‌ಎನ್‌ಯುಆರ್‌ಎಮ್)ಗಳ ಅಡಿಯಲ್ಲಿ ಪ್ರಯೋಜನಗಳು ಅಲ್ಪಸಂಖ್ಯಾತರಿಗೂ ಕೂಡಾ ಸರಿ ಸಮಾನವಾಗಿ ದೊರಕುತ್ತವೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು.

**13) ಕೋಮುವಾರು ಘಟನಾವಳಿಗಳನ್ನು ತಡೆಗಟ್ಟುವುದು.**

ಕೋಮುವಾರು ಸಂವೇದನಾ ಶೀಲತೆ ಹೊಂದಿರುವ ಜಿಲ್ಲೆಗಳಲ್ಲಿ ಅತ್ಯುನ್ನತ ದಕ್ಷತೆ ಹೊಂದಿರುವ, ನಿಷ್ಪಕ್ಷಪಾತ ಮತ್ತು ಜಾತ್ಯಾತೀತ ದಾಖಲೆ ಹೊಂದಿರುವ ಜಿಲ್ಲಾಧಿಕಾರಿಯನ್ನು ನೇಮಕ ಮಾಡುವುದು.

**14) ಕೋಮುವಾರು ಅಪರಾಧಗಳ ವಿರುದ್ಧ ವಿಚಾರಣೆ ನಡೆಸುವುದು.**

ಕೋಮುವಾರು ಅಪರಾಧಗಳ ವಿಚಾರಣೆಗಳನ್ನು ತೀವ್ರಗೊಳಿಸಿ ಅಪರಾಧಿಗಳಿಗೆ ಶೀಘ್ರವೇ ಶಿಕ್ಷೆ ದೊರಕುವಂತೆ ಖಚಿತಪಡಿಸಿಕೊಳ್ಳಲು ಕೋಮುವಾರು ಅಪರಾಧಗಳ, ವಿಚಾರಣೆಗಾಗಿ ವಿಶೇಷ ನ್ಯಾಯಾಲಯಗಳನ್ನು ನೇಮಕ ಮಾಡುವುದು.

**15) ಕೋಮುವಾರು ಹಿಂಸೆಯಿಂದಾಗಿ ತೊಂದರೆಗೊಳಗಾದವರಿಗೆ ಪುನರ್ವಸತಿ ಒದಗಿಸುವುದು.**

ಕೋಮುವಾರು ಹಿಂಸಾಕೃತ್ಯಗಳಲ್ಲಿ ತೊಂದರೆಗೊಳಗಾದವರಿಗೆ ತಕ್ಷಣವೇ ಪರಿಹಾರಗಳನ್ನು ಒದಗಿಸಲಾಗುವುದು ಮತ್ತು ಅದರ ಪುನರ್ವಸತಿಗಾಗಿ ಸಾಕಷ್ಟು ಹಣಕಾಸು ನೆರವನ್ನು ಒದಗಿಸಲಾಗುವುದು.

**ಸಲಹಾ ಕೇಂದ್ರದ ಚಟುವಟಿಕೆಗಳು**

1) ಕರ್ನಾಟಕ ಲೋಕಸೇವಾ ಆಯೋಗದಿಂದ ಗೆಜೆಟೆಡ್ ಪ್ರೊಬೇಶನರ್ಸ್ ಪರೀಕ್ಷೆಗೆ ಜಾಹೀರಾತನ್ನು ಉರ್ದು, ಇಂಗ್ಲೀಷ್ ಮತ್ತು ಕನ್ನಡ ದಿನ ಪತ್ರಿಕೆಗಳಲ್ಲಿ ಆಯೋಗದ ಸಲಹಾ ಕೇಂದ್ರದ ವತಿಯಿಂದ ಪ್ರಕಟಿಸಲಾಯಿತು. ಈ ಜಾಹೀರಾತಿಗೆ ಸ್ಪಂದಿಸಿ ಅಭ್ಯರ್ಥಿಗಳು ಅರ್ಜಿಗಳನ್ನು ಆನ್–ಲೈನ್ ಮುಖಾಂತರ ಸಲ್ಲಿಸಿ, ಆಯೋಗದ ಸಲಹಾ ಕೇಂದ್ರದಿಂದ ಸಲಹೆ ಪಡೆಯಬಹುದು.

2) ಕರ್ನಾಟಕ ರಾಜ್ಯ ಪೊಲೀಸ್ ನೇಮಕಾತಿಗಾಗಿ ಉರ್ದು ದಿನ ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ನೀಡಿದ್ದು, ಇದರ ಪ್ರಯುಕ್ತ ಅಭ್ಯರ್ಥಿಗಳು ಸಲಹಾ ಕೇಂದ್ರವನ್ನು ಸಂಪರ್ಕಿಸಿ ತಮ್ಮ ಅರ್ಜಿಗಳನ್ನು ಪೊಲೀಸ್ ಇಲಾಖೆಗೆ ಸಲ್ಲಿಸಬಹುದು.

3) ಮೊಬೈಲ್/ಎಸ್.ಎಂ.ಎಸ್. ಮುಖಾಂತರ BESCOM, National Centre for Disease Informatics and Research, Indian Space Research Organization, Canara Bank, National Dairy Research Institute, Electronics and Radar Development, Staff Selection Commission, ಇಲಾಖೆಗಳ ನೇಮಕಾತಿ ಬಗ್ಗೆ ಸೂಚನೆಗಳು ನೀಡಲಾಗಿದೆ.

4) ರೈಲ್ವೆ ಇಲಾಖೆ ನೇಮಕಾತಿ ಬಗ್ಗೆ ಉರ್ದು ಮತ್ತು ಕನ್ನಡ ದಿನಪತ್ರಿಕೆ, ಎಸ್ಎಂಎಸ್/ಇ–ಮೇಲ್ ಮುಖಾಂತರ ಜಾಹೀರಾತು ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಆನ್–ಲೈನ್ ಮುಖಾಂತರ ಅರ್ಜಿಗಳನ್ನು ಭರ್ತಿ ಮಾಡಬಹುದು.

5) ಪದವಿ ಪೂರ್ವ ಶಿಕ್ಷಣ ಇಲಾಖೆಯ ನೇಮಕಾತಿ ಬಗ್ಗೆ ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡಲಾಗಿದ್ದು, ಅಭ್ಯರ್ಥಿಗಳು ಆನ್–ಲೈನ್ ಮುಖಾಂತರ ಅರ್ಜಿಗಳನ್ನು ಸಲ್ಲಿಸಬಹುದು.

6) ಬಹುರಾಷ್ಟ್ರೀಯ ಕಂಪನಿಗಳಾದ ಐಬಿಎಂ, ಜೆಪಿ ಮೋರ್ಗಾನ್ ಹಾಗೂ ನಾರ್ತನ್ ಟ್ರಸ್ಟ್ ರವರು ಸಲಹಾ ಕೇಂದ್ರದ ಕಛೇರಿಯಲ್ಲೆ ಅಲ್ಪಸಂಖ್ಯಾತರ ಪದವೀಧರರಿಗೆ, ಅವರ ಅಧೀನದಲ್ಲಿ ಬರುವ ವಿವಿಧ ಸಂಸ್ಥೆಗಳಲ್ಲಿ ನೇಮಕಾತಿಗಾಗಿ ನೇರ–ಸಂದರ್ಶನಗಳನ್ನು ನಡೆಸಲಾಗುವುದು.

7) ಸಿಬ್ಬಂದಿ ಆಯ್ಕೆ ಆಯೋಗದಲ್ಲಿ ಡಾಟಾ ಎಂಟ್ರಿ ಅಪರೇಟರುಗಳ ಹಾಗೂ ಕಿರಿಯ ದರ್ಜೆ ಸಹಾಯಕರ ನೇಮಕಾತಿ ಬಗ್ಗೆ ಎಸ್ಎಂಎಸ್/ಇ–ಮೇಲ್ ಮುಖಾಂತರ ಅಭ್ಯರ್ಥಿಗಳಿಗೆ ಮಾಹಿತಿ ನೀಡಲಾಗುವುದು.

8) ಕರ್ನಾಟಕ ಲೋಕಸೇವಾ ಆಯೋಗದಿಂದ ಕಿರಿಯ ದರ್ಜೆ ಸಹಾಯಕರ ನೇಮಕಾತಿ ಬಗ್ಗೆ ಎಸ್ಎಂಎಸ್/ಇ–ಮೇಲ್ ಮುಖಾಂತರ ಅಭ್ಯರ್ಥಿಗಳಿಗೆ ಮಾಹಿತಿ ನೀಡಲಾಗುವುದು.

9) ವಿವಿಧ ಜಿಲ್ಲೆಗಳಲ್ಲಿ ಗ್ರಾಮ ಲೆಕ್ಕಾಧಿಕಾರಿಗಳ ನೇಮಕಾತಿ ಬಗ್ಗೆ ಎಸ್ಎಂಎಸ್/ಇ–ಮೇಲ್ ಮುಖಾಂತರ ಅಭ್ಯರ್ಥಿಗಳಿಗೆ ಮಾಹಿತಿ ನೀಡಲಾಗುವುದು.

10) ಪ್ರಿ–ಮೆಟ್ರಿಕ್ ಮತ್ತು ಪೋಸ್ಟ್–ಮೆಟ್ರಿಕ್ ವಿದ್ಯಾರ್ಥಿ ವೇತನದ ಮಾಹಿತಿ ಹಾಗೂ ಸಲಹೆಯನ್ನು ದೂರವಾಣಿ ಮುಖಾಂತರ ನೀಡಲಾಗುವುದು.

**ರೋಜ್‌ಗಾರ್ ಅರ್ಜಿ**

ನಿರುದ್ಯೋಗಿ ಯುವಕರುಗಳು ರೋಜ್‌ಗಾರ್ ಅರ್ಜಿಗಳನ್ನು ನೋಂದಾಯಿಸಿದ್ದ ಅಭ್ಯರ್ಥಿಗಳಿಗೆ ಮಾಹಿತಿಯನ್ನು ಕೌಶಲ್ಯ ತರಬೇತಿ ನಿಗಮಕ್ಕೆ ಕಳುಹಿಸಲಾಗುವುದು.

**2013–14ನೇ ಸಾಲಿಗೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳು**

1) ಪ್ರಧಾನ ಮಂತ್ರಿಗಳ ಹೊಸ 15 ಅಂಶಗಳ ಕಾರ್ಯಕ್ರಮಗಳ ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಪರಿಶೀಲನೆ.

2) ಅಲ್ಪಸಂಖ್ಯಾತರಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಅರಿವು ಮೂಡಿಸುವುದು.

3) ಜಿಲ್ಲಾ/ತಾಲ್ಲೂಕು ಕೇಂದ್ರಗಳಲ್ಲಿ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಕೆಲಸ ನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗಳ ಕಾರ್ಯಾಗಾರವನ್ನು ನಡೆಸುವುದು.

4) ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ, ನಿರುದ್ಯೋಗಿ ಯುವಕ/ಯುವತಿಯರು ಹಾಗೂ ಸಾರ್ವಜನಿಕರಿಗೆ ಶೈಕ್ಷಣಿಕ, ಜೀವನ ವೃತ್ತಿ ಮತ್ತು ಉದ್ಯೋಗದ ಬಗ್ಗೆ ಸಲಹೆ ನೀಡಲಾಗುವುದು. ಇದರಿಂದಾಗಿ ಅಲ್ಪಸಂಖ್ಯಾತರಲ್ಲಿ ವೈಯಕ್ತಿಕವಾಗಿ ಶೈಕ್ಷಣಿಕ ಹಾಗೂ ಅಭಿವೃದ್ಧಿಯ ಬಗ್ಗೆ ದೊರೆಯುವ ಸವಲತ್ತುಗಳ ಬಗ್ಗೆ ಅರಿವು ಮೂಡಿಸಲು ಸಹಾಯವಾಗುತ್ತದೆ.

5) ಸಹಕಾರ ಇಲಾಖೆಯ ಸಮನ್ವಯದೊಂದಿಗೆ ಅಲ್ಪಸಂಖ್ಯಾತರನ್ನು ಎಲ್ಲಾ ಬಗೆಯ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೊಂದಾಯಿಸುವುದು.

**ಕರ್ನಾಟಕ ರಾಜ್ಯ ಹಜ್ ಸಮಿತಿ**

ದಿನಾಂಕ: 26–06–2009ರ ಸಂಖ್ಯೆ: SWD 07 WHJ 09 ರ ಅನ್ವಯ ಕರ್ನಾಟಕ ರಾಜ್ಯ ಸರ್ಕಾರವು ಕೇಂದ್ರದ ಹಜ್ ಆಕ್ಟ್ 2002ಗೆ ಅನುಗುಣವಾಗಿ 15 ಸದಸ್ಯರನ್ನೊಳಗೊಂಡ ಕರ್ನಾಟಕ ರಾಜ್ಯ ಹಜ್ ಸಮಿತಿಯನ್ನು ರಚಿಸಿದ್ದು, ಈ ಸಮಿತಿಯಿಂದಲೇ ಅಧ್ಯಕ್ಷರನ್ನು ಆಯ್ಕೆ ಮಾಡಲಾಗಿರುತ್ತದೆ.

**ಹಜ್ 2013**

- ಹಜ್ 2013ಗಾಗಿ 15521 ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ್ದು, ಆನ್ ಲೈನ್ ಕಂಪ್ಯೂಟರ್ ಜಿಲ್ಲಾವಾರು ಯಾತ್ರಿಗಳ ಆಯ್ಕೆಯ ಖುರ್ರಾ (ಲಾಟರಿ) ಕಾರ್ಯಕ್ರಮವನ್ನು ಮಾಡಲಾಗಿತ್ತು.
- ಕರ್ನಾಟಕ ರಾಜ್ಯದಿಂದ 6894 ಯಾತ್ರಿಗಳು ನಾಲ್ಕು ಎಂಬಾರ್‌ಕೇಷನ್‌ಗಳಿಂದ ಹಜ್ ಯಾತ್ರೆಗೆ ಪ್ರಯಾಣ ಮಾಡಿರುತ್ತಾರೆ. 1) ಬೆಂಗಳೂರು, 2) ಮಂಗಳೂರು, 3) ಹೈದರಾಬಾದ್ ಹಾಗೂ 4) ಗೋವಾ.
- ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಹಜ್ ಸಮಿತಿಗೆ ನಿರ್ವಾಹಣ ಅನುದಾನ ಹಾಗೂ ಹಜ್ ಕ್ಯಾಂಪ್‌ಗಳ ನಿರ್ವಹಣೆಗಾಗಿ ರೂ.150.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿರುತ್ತದೆ
- ಮುಂಬೈನ ಕೇಂದ್ರ ಹಜ್ ಸಮಿತಿಯ ನಿರ್ದೇಶನದಂತೆ ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಹಜ್ ಯಾತ್ರೆಗೆ ಆಯ್ಕೆಗೊಂಡ ಯಾತ್ರಿಕರಿಗಾಗಿ ಜಿಲ್ಲಾವಾರು ಚುಚ್ಚುಮದ್ದು / ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗುತ್ತಿದೆ.

**ಹಜ್ 2014:**

- ಹಜ್ 2014ಗಾಗಿ 17182 ಅರ್ಜಿಗಳು ದಿನಾಂಕ 22–03–2014 (ಕೊನೆಯ ದಿನಾಂಕ) ರಂದು ಸ್ವಿಕೃತವಾಗಿದ್ದು, ಆನ್ ಲೈನ್ ಕಂಪ್ಯೂಟರ್ ಜಿಲ್ಲಾವಾರು ಯಾತ್ರಿಗಳ ಆಯ್ಕೆಯ ಖುರ್ರಾ (ಲಾಟರಿ) ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿ 4977 ಯಾತ್ರಾರ್ಥಿಗಳನ್ನು ಆಯ್ಕೆ ಮಾಡಲಾಗಿದೆ.

ಅದೇ ದಿನದಂದು ಮುಂಬೈನ ಭಾರತೀಯ ಹಜ್ ಕಮಿಟಿಯವರು ತಮ್ಮ ವೆಬ್ ಸೈಟಿನಲ್ಲಿ ಈ ಫಲಿತಾಂಶವನ್ನು ಪ್ರಕಟಿಸಿದ್ದು, ದಿನಾಂಕ: 28.05.2014 ರ ದಿನಪತ್ರಿಕೆಗಳಲ್ಲಿ ಆಯ್ಕೆಯಾದ ಯಾತ್ರಾರ್ಥಿಗಳ ಫಲಿತಾಂಶವನ್ನು ಪ್ರಕಟಿಸಲಾಗಿರುತ್ತದೆ.

ಆಯ್ಕೆಯಾದ ಅರ್ಜಿದಾರರ ಅರ್ಜಿಗಳನ್ನು ಹಾಗೂ ಅವರಿಂದ ಸ್ವೀಕೃತವಾದ ಪಾಸ್ ಪೋರ್ಟ್‌ಗಳನ್ನು ರಾಜ್ಯ ಹಜ್ ಸಮಿತಿಯು ಮುಂದಿನ ಕ್ರಮಕ್ಕಾಗಿ ಮುಂಬೈನ ಭಾರತೀಯ ಹಜ್ ಕಮಿಟಿಯವರಿಗೆ ರವಾನೆ ಮಾಡಿರುತ್ತದೆ.

ಮುಂಬೈನ ಭಾರತೀಯ ಹಜ್ ಕಮಿಟಿಯ ವೆಬ್ ಸೈಟಿನಲ್ಲಿ ಪ್ರಕಟಿಸಿದಂತೆ ಪ್ರಿಫರೆನ್ಷಿಯಲ್ ವೇಟಿಂಗ್ ಲಿಸ್ಟ್‌ನವರಿಗೂ ಸಹ ಆಯ್ಕೆ ಮಾಡುವ ಪ್ರಕ್ರಿಯೆ ರಾಜ್ಯ ಹಜ್ ಸಮಿತಿಯವರು ನಡೆಸಿರುತ್ತದೆ.

ಹಜ್ 2013 ಗಾಗಿ ಕರ್ನಾಟಕ ರಾಜ್ಯ ಸಮಿತಿಯು 23 ಮಂದಿ ಖಾದಿಮುಲ್ ಹುಜ್ಜಾಜ್‌ರನ್ನು ಹಜ್ ಯಾತ್ರೆಯ ಸಮಯದಲ್ಲಿ ಯಾತ್ರಿಕರ ಸಹಾಯಕ್ಕಾಗಿ ನೇಮಿಸಿ, ನಿಯೋಜಿಸಲಾಯಿತು. ಅಡಿಷನಲ್ ಖೋಟಾ ಸೇರಿದಂತೆ ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಹಜ್ – 2013ರಲ್ಲಿ 7335 ಯಾತ್ರಿಕರು ಹಜ್ ಯಾತ್ರೆಗೆ ಪ್ರಯಾಣ ಮಾಡಿರುತ್ತಾರೆ.

**ಯಾತ್ರಾರ್ಥಿಗಳ ಲಸಿಕೆ ಕಾರ್ಯಕ್ರಮ:**

ಕರ್ನಾಟಕ ರಾಜ್ಯ ಹಜ್ ಸಮಿತಿಯು ರಾಜ್ಯ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ನಿರ್ದೇಶನಾಲಯದ ಸಹಕಾರದೊಂದಿಗೆ ಆಯ್ಕೆಯಾದ ಯಾತ್ರಿಕರಿಗೆ ಮೆನಂಜೈಟಿಸ್ ಲಸಿಕೆ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತದೆ. ಈ ಚುಚ್ಚುಮದ್ದು ಕಾರ್ಯಕ್ರಮವನ್ನು ಜಿಲ್ಲಾವಾರು ಆಯೋಜಿಸಲಾಗಿದ್ದು, ಖಾಸಗಿಯಾಗಿ ಹಜ್ ಯಾತ್ರೆಗೆ ಪ್ರಯಾಣಿಸುವ ಯಾತ್ರಿಕರಿಗೂ ನೀಡಲಾಗುತ್ತದೆ.

**ತರಬೇತಿ ಕಾರ್ಯಕ್ರಮ:**

ಹಜ್–2000 ರಿಂದ ಯಾತ್ರಿಕರಿಗೆ ಹಜ್ ಯಾತ್ರೆಯು ಸುಗಮವಾಗಿ ಹಾಗೂ ಸುಲಲಿತವಾಗಿ ಮಾಡಲು ಸಹಾಯಕವಾಗುವಂತೆ ತರಬೇತಿ ಕಾರ್ಯಕ್ರಮವನ್ನು ರಾಜ್ಯ ಹಜ್ ಸಮಿತಿಯು ಆಯೋಜಿಸುತ್ತಿದ್ದು, ಈ ತರಬೇತಿ ಕಾರ್ಯಕ್ರಮದಲ್ಲಿ ಹೆಚ್ಚಿನ ಯಾತ್ರಿಕರು ಭಾಗವಹಿಸಲು ಅನುವಾಗುವಂತೆ ಚುಚ್ಚುಮದ್ದು ಕಾರ್ಯಕ್ರಮವನ್ನು ಸಹ ಜಿಲ್ಲಾವಾರು ಹಮ್ಮಿಕೊಳ್ಳಲಾಗುತ್ತಿದೆ.

**ಹಜ್ ಕ್ಯಾಂಪ್:**

ಹಜ್ ಯಾತ್ರಿಗಳ ಸುಗಮ, ಸುಖಕರ ಪ್ರಯಾಣಕ್ಕಾಗಿ ಹಾಗೂ ಸೌದಿ ಅರೇಬಿಯಾಕ್ಕೆ ಹಜ್ ಯಾತ್ರಾರ್ಥಿಗಳ ಪ್ರಯಾಣ ಆರಂಭವಾಗುವ ಮುನ್ನ ರಾಜ್ಯ ಹಜ್ ಸಮಿತಿಯು ಬೆಂಗಳೂರಿನ ಮಿಲ್ಲರ್ ರಸ್ತೆಯಲ್ಲಿರುವ ಖುದ್ದೂಸ್ ಸಾಬ್ ಈದ್ಗಾ ಮೈದಾನದಲ್ಲಿ ಹಜ್ ಕ್ಯಾಂಪನ್ನು ಆಯೋಜಿಸಿರುತ್ತದೆ. ಹಜ್ ಕ್ಯಾಂಪ್‌ನಲ್ಲಿ ತಮ್ಮ ಪ್ರಯಾಣಕ್ಕೆ ಮುನ್ನ ಹಜ್ ಯಾತ್ರಿಗಳು ಉಳಿದುಕೊಳ್ಳಲು ಎಲ್ಲಾ ವ್ಯವಸ್ಥೆಯನ್ನು ರಾಜ್ಯ ಹಜ್ ಸಮಿತಿಯು ಮಾಡಿರುತ್ತದೆ. ಅಂದರೆ ತಾತ್ಕಾಲಿಕವಾಗಿ ಉಳಿದುಕೊಳ್ಳುವ ವ್ಯವಸ್ಥೆಯೊಂದಿಗೆ, ನೀರಿನ ವ್ಯವಸ್ಥೆ, ಶೌಚಾಲಯ, ಕಾಗದ ಪತ್ರಗಳ ಹಂಚಿಕೆ, ಯಾತ್ರಿಗಳನ್ನು ವಿಮಾನ ನಿಲ್ದಾಣಕ್ಕೆ ತಲುಪಿಸುವ ಸಾರಿಗೆ ವ್ಯವಸ್ಥೆ, ಇಮ್ಮಿಗ್ರೇಷನ್ ವ್ಯವಸ್ಥೆ ಹಾಗೂ ಇನ್ನಿತರೆ ವ್ಯವಸ್ಥೆಗಳನ್ನು ಹಜ್ ಕ್ಯಾಂಪ್‌ಗಳಲ್ಲಿಯೇ ಸಂಬಂಧಪಟ್ಟ ಇಲಾಖೆಗಳ ಸಹಕಾರದಿಂದ ನೀಡಲಾಗಿರುತ್ತದೆ. ಕರ್ನಾಟಕ ರಾಜ್ಯ ಹಜ್ ಸಮಿತಿಯು ಆಯೋಜಿಸಿರುವ ಈ ಕ್ಯಾಂಪ್‌ನಲ್ಲಿ ಸಂಬಂಧಪಟ್ಟ ಇಲಾಖೆಯ ಅಧಿಕಾರಿ ವರ್ಗದವರು,

ಸಾಮಾಜಿಕ ಕಾರ್ಯಕರ್ತರು, ಬೆಂಗಳೂರಿನ ಸರ್ಕಾರೇತರ ಸಂಘ ಸಂಸ್ಥೆಗಳಾದ ಖುದ್ದಾಮುಲ್ ಮುಸ್ಲಿಮೀನ್, ಮಜ್ಲಿಸೆ ಮಿಲಿಯಾ, ಬಿಸ್ಮಿಲ್ಲಾ ಎಜುಕೇಶನ್ ಟ್ರಸ್ಟ್, ಅಲ್ಮಾಸ್ ಎಜುಕೇಶನ ಸಮಿತಿ, ಗಾರ್ಡನ್ ಸಿಟಿ ಎಜುಕೇಶನ್ ಸಮಿತಿ ಹಾಗೂ ಸ್ವಯಂ ಸೇವಾ ಕಾರ್ಯಕರ್ತರು ಭಾಗವಹಿಸಿದ್ದು, ಸದರಿ ಕ್ಯಾಂಪ್‌ನ್ನು ಸರಿಯಾದ ರೀತಿಯಲ್ಲಿ ಆಯೋಜಿಸಲು ಸಹಕಾರ ನೀಡಿರುತ್ತಾರೆ.

ನಿರ್ಗಮನ ಹಾಗೂ ಆಗಮನದಲ್ಲಿ ಮಾಡುವ ಸೌಕರ್ಯಗಳನ್ನು ಸಮಸ್ತ ಕಡೆಯಿಂದಲ್ಲೂ ರಾಜ್ಯದ ಹಜ್ ಸಮಿತಿಗೆ ಒಳ್ಳೆಯ ಹೆಸರು ಬಂದಿರುತ್ತದೆ. ಹಜ್ 1996 ರಿಂದ 2002ರವರೆಗೆ ಆಯೋಜಿಸಲಾಗಿದ್ದ ಕ್ಯಾಂಪ್‌ಗಳಿಗಾಗಿ ಭಾರತದ ವಿದೇಶಾಂಗ ಸಚಿವಾಲಯದಿಂದ ಹಾಗೂ ಮುಂಬೈನ ಭಾರತೀಯ ಹಜ್ ಕಮಿಟಿಯವರಿಂದ ಪ್ರಶಂಸೆ ಪಡೆದಿದ್ದು, ಪುರಸ್ಕೃತವನ್ನು ಸಹ ರಾಜ್ಯ ಹಜ್ ಸಮಿತಿಯು ಪಡೆದಿರುತ್ತದೆ.

ದಿನಾಂಕ: 02–10–2011 ರಿಂದ 11–10–2011ರವರೆಗೆ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಹಾಗೂ ಕೊಡಗು ಜಿಲ್ಲೆಗಳ ಹಜ್ ಯಾತ್ರಿಕರಿಗಾಗಿ ಮಂಗಳೂರಿನ ಬಜ್ಪೆಯ ಹಳೆಯ ವಿಮಾನ ನಿಲ್ದಾಣದಲ್ಲಿ ಹಜ್ ಕ್ಯಾಂಪ್‌ನ್ನು ರಾಜ್ಯ ಹಜ್ ಸಮಿತಿಯ ವತಿಯಿಂದ ಆಯೋಜಿಸಿದ್ದು, ಸುಮಾರು 810 ಯಾತ್ರಿಕರು ಮಂಗಳೂರಿನಿಂದ ಹಜ್ ಯಾತ್ರೆಗಾಗಿ ಪ್ರಯಾಣಿಸಿದ್ದರು. ಬೆಂಗಳೂರಿನಲ್ಲಿ ಆಯೋಜಿಸುವ ರೀತಿಯಲ್ಲೆ ಮಂಗಳೂರಿನಲ್ಲೂ ಸಹ ಸೌಕರ್ಯಗಳನ್ನು ಮಾಡಲಾಯಿತು.

ಬೀದರ್, ಕಲಬುರಗಿ ಹಾಗೂ ಯಾದಗಿರಿ ಜಿಲ್ಲೆಗಳ ಸುಮಾರು 799 ಯಾತ್ರಿಕರು ಆಂಧ್ರಪ್ರದೇಶದ ಹೈದರಾಬಾದಿನ ಅಂತರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಹಜ್ ಯಾತ್ರೆಗೆ ಪ್ರಯಾಣ ಮಾಡಿರುತ್ತಾರೆ.

ಹಜ್–2011ನೇ ಸಾಲಿನಲ್ಲಿ 17 ಖಾದಿಮುಲ್ ಹುಜ್ಜಾಜ್ (ಹಜಾಯವರ ಸಹಾಯಕರು) ಕರ್ನಾಟಕ ರಾಜ್ಯ ಹಜ್ ಸಮಿತಿಯಿಂದ ರಾಜ್ಯ ಹಜ್ ಯಾತ್ರಿಕರ ಸಹಾಯಕ್ಕಾಗಿ ನಿಯೋಜಿಸಿದ್ದು, ಕರ್ನಾಟಕ ರಾಜ್ಯದಿಂದ ಸುಮಾರು 7335 ಯಾತ್ರಿಕರು ಹಜ್‌ಗಾಗಿ (ಅಧಿಕೃತ ಕೋಟಾ, ಸರ್ಕಾರಿ ಕೋಟಾ, ಇನ್ನೀತರೆ ಸೇರಿದಂತೆ) ಪ್ರಯಾಣ ಮಾಡಿರುತ್ತಾರೆ.

ಭಾರತ ಸರ್ಕಾರದ ವಿದೇಶಾಂಗ ಸಚಿವಾಲಯದ ನಿರ್ದೇಶನದ ಮೇರೆಗೆ ಹಜ್ ಯಾತ್ರಿಕರು ಉಳಿದುಕೊಳ್ಳಲು ಸೌದಿ ಅರೇಬಿಯಾದ ಮೆಕ್ಕಾ ಮತ್ತು ಮದೀನ ನಗರಗಳಲ್ಲಿ ವಸತಿ ಆಯ್ಕೆ ಮಾಡುವ ಸಲುವಾಗಿ ರಾಜ್ಯ ಸರ್ಕಾರದ ಹಿರಿಯ ಅಧಿಕಾರಿಯನ್ನು ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ನಿಯೋಜಿಸಲಾಗಿತ್ತು.

**Guidelines for Selection of Khuddam-ul-Hujjaj**

Each State Haj Committee may appoint one Khuddam-ul-Hujjaj for every 300 Pilgrims from the State.

2. The State Haj Committees are requested to keep the following points in mind while nominating Khuddam-ul-Hujjaj, Distribution of Haj amongst States.

a) Individuals (male only) should be between the age of 25 and 50 years as on 01-07-2012. He should be an active person of sound health with experience of management of public functions.

b) Only those persons who have attended orientation/training camps organized by the Haj Committee of India/State Haj Committees will be considered for selection as Khuddam-ul-Hujjaj.

c) The individuals selected should preferably be Government servants, such as B.D.O., Tehsildar or School Teacher, etc. subject to no objection from the respective Departments. But he should not be a senior official like Class I of Central or State Government or of an All India Cadre. All nominees should have good knowledge of Haj related activities and the concerned State Haj Committees should also vouch safe their good conduct as Khuddam-ul-Hujjaj and a certificate to this effect will be attached to the application form.

d) 15% of the total Khuddam-ul-Hujjaj will be selected from the employees of respective State Hajj Committee and State Wakf Board. Executive Officer of the respective state Hajj Committee shall furnish a certificate along with the application stating that all the application has been checked properly and fund in order in all respect.

e) No family member should accompany a Khuddam-ul-Hujja during Hajj period.

f) He should have no connection with any Saudi Mallim. In addition, he should not accept any financial or other consideration from any pilgrim as the Khuddam-ul-Hujjaj is expected to render free social service.

g) Preference should be given to those having knowledge of Arabic language and experience in Hajj.

h) A person who has once served as a Khuddam-ul-Hujjaj and against whom there are adverse observations by the Consulate General of India, Jeddah, will not be considered.

i) He should travel with the pilgrims from the respective state. No Khuddam-ul-Hujjaj shall be allowed to travel separately.

j) The selected Khuddam-ul-Hujjaj may also warned in writing that in case any adverse report on the performance of duties by a Khuddam-ul-Hujjaj is received from the consulate General of India, Jeddah or from this Ministry, he may have to refund the entire amount of expenditure incurred by the State Hajj Committee on his journey to Saudi Arabia.

k) The State Hajj Committees should arrange a brief guidance/training course for the Khuddam-ul-Hujjaj before their departure. They should be issued certificate to this effect, which should be submitted to our consulate General on arrival at Jeddah.

3. The enclosed note detailing duties of Khuddam-ul-Hujjaj may please be got translated in the regional language of your State and a copy given to each of the persons selected for study and guidance.

4. On arrival in Saudi Arabia, each Khuddam-ul-Hujjaj should discharge his duties under the supervision and direction of the Consulate General of India. He Should report to them regularly and be generally available when his services are required. Before his

**4(1)ಬಿ(ix) (x):- ಶಾಖಾಧಿಕಾರಿ (ಅಲ್ಪಸಂಖ್ಯಾತರ ಕಲ್ಯಾಣ ಶಾಖೆ) ಶಾಖೆಯ ನೌಕರರ ಮಾಹಿತಿ ಹಾಗೂ ಪಡೆಯುತ್ತಿರುವ ವೇತನ.**

| ಕ್ರಮ ಸಂಖ್ಯೆ | ಹುದ್ದೆ | ಹೆಸರು ಶ್ರೀ/ಶ್ರೀಮತಿ | ದೂರವಾಣಿ ಸಂಖ್ಯೆ | ಮಾಸಿಕ ವೇತನ |
|---|---|---|---|---|
| 1 | ಶಾಖಾಧಿಕಾರಿ (ಅಲ್ಪಸಂಖ್ಯಾತರ ಕಲ್ಯಾಣ) | ಅಕ್ರಂ ಭಾಷ | 22034479 | 34,500/– |
| 2 | ಹಿರಿಯ ಸಹಾಯಕ | ಮುಖ್ತಾರ್ ಪಾಷ | 22034479 | 29,000/– |
| 3 | ಸಹಾಯಕರು–1 | ಸುಲ್ತಾನಾ ಬೇಗಂ | 22034479 | 26,000/– |
| 4 | ಸಹಾಯಕರು–2 | ಆರ್.ಹಾದಿಮನಿ | 22034479 | 38,000/– |
| 5 | ಕಿರಿಯ ಸಹಾಯಕ | ಖಾಲಿ | 22034479 | – |
| 6 | ಬೆರಳಚ್ಚುಗಾರರು | ಹುದ್ದೆ ಖಾಲಿ | 22034479 | – |
| 7 | ದಲಾಯತ್ | ನಾರಾಯಣ | 22034479 | 19,900/– |

**4(1)ಬಿ(xi):– ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸುವ ಪ್ರಸ್ತಾವಿತ ವೆಚ್ಚಗಳನ್ನು ಮತ್ತು ಮಾಡಲಾದ ಬಟವಾಡೆ ವರದಿಯನ್ನು ಸೂಚಿಸಿ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ**

1) ಅಲ್ಪಸಂಖ್ಯಾತರ ನಿರ್ದೇಶನಾಲಯ
2) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ
3) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ

| ಇಲಾಖೆ | 2013–14ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಿರುವ ಅನುದಾನ | | | 2013–14ನೇ ಸಾಲಿನ ಮೊದಲನೇ ಕಂತಿನಲ್ಲಿ ಬಿಡುಗಡೆ ಮಾಡಲಾದ ಶೇಕಡ 25%ರಷ್ಟು ಅನುದಾನ | | |
|---|---|---|---|---|---|---|
| | ಯೋಜನೆ | ಯೋಜನೇತರ | ಒಟ್ಟು | ಯೋಜನೆ | ಯೋಜನೇತರ | ಒಟ್ಟು |
| DOM | 22350.00 | 454.93 | 22804.93 | 5587.50 | 113.72 | 5701.22 |
| KMDC | 5500.00 | –– | 5500.00 | 1375.00 | –– | 1375.00 |
| KSMC | –– | 150.00 | 150.00 | –– | 37.50 | 37.00 |
| HAJ | 1500.00 | –– | 1500.00 | 375.00 | –– | 375.00 |
| WAKF | 2100.00 | –– | 2100.00 | 525.00 | –– | 525.00 |
| KUA | 50.00 | 08.00 | 58.00 | 12.50 | 02.00 | 14.50 |
| Total | 31500.00 | 612.93 | 32112.93 | 7875.00 | 153.22 | 8028.22 |

**4(1)ಬಿ(xii):– ಹಂಚಿಕೆ ಮಾಡಲಾದ ಮೊಬಲಗುಗಳನ್ನೊಳಗೊಂಡು, ಸಹಾಯ ಧನ ಕಾರ್ಯಕ್ರಮಗಳನ್ನು ಜಾರಿಯ ವಿಧಾನವನ್ನು ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರ:**

| ಕ್ರಮ ಸಂಖ್ಯೆ | ಕಾರ್ಯಕ್ರಮಗಳ ವಿವರ |
|---|---|
| 1 | ಕ್ರೈಸ್ತರ ಅಭಿವೃದ್ಧಿ ಯೋಜನೆ |
| 2 | ಸಮುದಾಯ ಭವನ/ಶಾದಿಮಹಲ್ ನಿರ್ಮಾಣ |
| 3 | ಕೌಶಲ್ಯ ಅಭಿವೃದ್ಧಿ ಯೋಜನೆ |
| 4 | ಸರ್ಕಾರಿ ಅಲ್ಪಸಂಖ್ಯಾ ಶಾಲೆಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು |
| 5 | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಉತ್ತೇಜನ |
| 6 | ಅಲ್ಪಸಂಖ್ಯಾತರಿಗಾಗಿ ನೂತನ ಹಾಸ್ಟಲ್‌ಗಳ ಪ್ರಾರಂಭ |
| 7 | ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ |
| 8 | ಶಿಕ್ಷಣ ಇಲಾಖೆಯಿಂದ ವರ್ಗಾವಣೆಗೊಂಡ ಮೊರಾರ್ಜಿದೇಸಾಯಿ ವಸತಿ ಶಾಲೆಗಳು |
| 9 | ಜಿಲ್ಲಾ ಪಂಚಾಯತ್‌ನಿಂದ ವರ್ಗಾವಣೆಗೊಂಡ ಮೊರಾರ್ಜಿದೇಸಾಯಿ ವಸತಿ ಶಾಲೆಗಳು |
| 10 | ಅಲ್ಪಸಂಖ್ಯಾತರಿಗಾಗಿ ಹುಡ್ಕೋ ಸಾಲಗಳು |
| 11 | ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ |
| 12 | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಭೋಧನಾ ಶುಲ್ಕ (ಪರಿಹಾರಕ ಭಾಷೆ ಕಲಿಸುವುದು) |

| ಕ್ರಮ ಸಂಖ್ಯೆ | ಕಾರ್ಯಕ್ರಮಗಳ ವಿವರ |
|---|---|
| 13 | ಅಲ್ಪಸಂಖ್ಯಾತರಿಗಾಗಿ ದುಡಿಯುವ ಮಹಿಳೆಯರ ವಸತಿ ಗೃಹ ಯೋಜನೆ |
| 14 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ಮಾಣ |
| 15 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಕಟ್ಟಡಗಳು/ಸಾಲ ಮೇಲುಸ್ತುವಾರಿ |
| 16 | ಅಲ್ಪಸಂಖ್ಯಾತರಿಗಾಗಿ ಹಾಸ್ಟೆಲ್ ಕಟ್ಟಡಗಳ ನಿರ್ಮಾಣ (ವಿಶೇಷ ಅಭಿವೃದ್ಧಿ ಯೋಜನೆ) |

**4(1)ಬಿ(xiii):– ರಿಯಾಯಿತಿಗಳನ್ನು ಪಡೆಯುವವರ, ಅನುಮತಿಗಳು ಅಥವಾ ಸಾರ್ವಜನಿಕ ಪ್ರಾಧಿಕಾರದಿಂದ ಮಂಜೂರಾದ ಅಧಿಕಾರ ಪತ್ರಗಳ ವಿವರಗಳು:**

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ನೇರವಾಗಿ ಯಾವುದೇ ರಿಯಾಯಿತಿ, ಅನುಮತಿ ಹಾಗೂ ಅಧಿಕಾರ ಪತ್ರ ವಿಸ್ತರಿಸುವುದಿಲ್ಲ.

**4(1)ಬಿ(xiv):– ವಿದ್ಯುನ್ಮಾನ ರೂಪದಲ್ಲಿ ಲಭ್ಯವಿರುವ ಇಲಾಖೆಯ ವಿವಿಧ ಯೋಜನೆಗಳ ವಿವರಗಳು ಮಾಹಿತಿಯನ್ನು ಒದಗಿಸುವುದು (ಫ್ಲಾಪಿ, ಸಿಡಿ, ವಿಸಿಡಿ, ವೆಬ್‌ಸೈಟ್ ಇಂಟರ್‌ನೆಟ್ ಇತ್ಯಾದಿ)**

ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆಗೆ ಸಂಬಂಧಪಟ್ಟ ಮಾಹಿತಿಗಳು ಇಲಾಖೆಯ ಮತ್ತು ಅಧೀನ ಇಲಾಖೆಯ ಈ ಕೆಳಕಾಣಿಸಿದ ವೆಬ್‌ಸೈಟ್‌ಗಳಲ್ಲಿ ಲಭ್ಯವಿರುತ್ತದೆ.

1) ಕೇಂದ್ರ ಅಲ್ಪಸಂಖ್ಯಾತರ ಕಲ್ಯಾಣ ಮಂತ್ರಾಲಯ – www.minorityaffairs.gov.in
2) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ – www.karmin.in
3) ಅಲ್ಪಸಂಖ್ಯಾತರ ನಿರ್ದೇಶನಾಲಯ – www.gokdom.com
4) ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ – www.kmdc.in
5) ಕರ್ನಾಟಕ ರಾಜ್ಯ ವಕ್ಫ್ ಮಂಡಳಿ – www.karwakf.org
6) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಪ್ರತಿಷ್ಠನಾ – www.kswwf.com
7) ಮೌಲಾನಾ ಅಜಾದ್ ಎಜುಕೇಷನ ಪೌಂಡೇಷನ್ – www.maef.nic.in
8) ಕರ್ನಾಟಕ ರಾಜ್ಯ ಹಜ್ ಸಮಿತಿ – www.karhaj.in
9) ಕೌನ್ಸಿಲಿಂಗ್ ಸೆಂಟರ್ ಫಾರ್ ಎಜುಕೇಷನ್ ಅಂಡ್ ಎಂಪ್ಲೈಮೆಂಟ್ ಫಾರ್ ಮೈನಾರಿಟಿಸ್ – www.minorityguidance.com

**4(1)ಬಿ(xv):– ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ಲಭ್ಯವಿರುವ ಸೌಲಭ್ಯಗಳ ಬಗ್ಗೆ ವಿವರಗಳು.**

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟ ಮಾಹಿತಿಗಳು ಇಲಾಖೆಯ ವೆಬ್‌ಸೈಟ್‌ಗಳು ಈ ಕೆಳಕಂಡಂತಿರುತ್ತವೆ.

1. ಕರ್ನಾಟಕ ರಾಜ್ಯ ವಕ್ಫ್ ಮಂಡಳಿ – www.karwakf.orgnb
2. ಕರ್ನಾಟಕ ರಾಜ್ಯ ಹಜ್ ಸಮಿತಿ – www.karhaj.in
3. ಕರ್ನಾಟಕ ರಾಜ್ಯ ವಕ್ಫ್ ಕೌನ್ಸಿಲ್ –
4. ಕರ್ನಾಟಕ ರಾಜ್ಯ ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ – www.kswwf.com
5. ಕರ್ನಾಟಕ ರಾಜ್ಯ ಉರ್ದು ಅಕಾಡೆಮಿ

ಹಾಗೂ ಕರ್ನಾಟಕ ಮಾಹಿತಿ ಹಕ್ಕು ಕಾಯ್ದೆಯನ್ವಯ ಇಲಾಖೆಯ ವತಿಯಿಂದ ನೇಮಕಗೊಂಡ ಮಾಹಿತಿ ಅಧಿಕಾರಿಗಳ ಮೂಲಕ ಮಾಹಿತಿಗಳನ್ನು ಪಡೆದುಕೊಳ್ಳಬಹುದು.

4(1)ಬಿ(xvi):– ಸಾರ್ವಜನಿಕರಿಗೆ ಮಾಹಿತಿ ಅಧಿಕಾರಿಗಳ ಹೆಸರುಗಳು, ಪದನಾಮಗಳು ಮತ್ತು ಇತರೆ ಮಾಹಿತಿ

| **ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ವಿಳಾಸ** | **ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹೆಸರು ಮತ್ತು ವಿಳಾಸ** | **ಮೇಲ್ಮನವಿ ಪ್ರಾಧಿಕಾರಿಯ ಹೆಸರು ಮತ್ತು ವಿಳಾಸ** |
|---|---|---|
| ಶ್ರೀ ಅಬ್ಬಾಸ್ ಷರೀಫ್<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ<br>ನಂ.215, 2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು–01<br>ದೂರವಾಣಿ–2203 4474 | ಶ್ರೀ ಅಕ್ರಂ ಭಾಷಾ,<br>ಶಾಖಾಧಿಕಾರಿಗಳು<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ (ಅ.ಸಂ.ಕಲ್ಯಾಣ)<br>ನಂ.215, 2ನೇ ಮಹಡಿ, ವಿಕಾಸ ಸೌಧ, ಬೆಂಗಳೂರು<br>ದೂರವಾಣಿ–22034979 | ಶ್ರೀಮತಿ ನಾಗರತ್ನ ಎಂ<br>ಉಪಕಾರ್ಯದರ್ಶಿ<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ<br>ನಂ.215, 2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು.<br>ದೂರವಾಣಿ–22034469 |

4(1)ಬಿ(xvii):– ನಿಯಮಿಸಬಹುದಾದಂತಹ ಮಾಹಿತಿಗಳನ್ನು ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ ಪ್ರತಿವರ್ಷ ಈ ಪ್ರಕಟಣೆಗಳನ್ನು ಅಂದಿನವರೆಗೆ ಪರಿಷ್ಕರಿಸತಕ್ಕದ್ದು.

**ಅಬ್ಬಾಸ್ ಷರೀಫ್**
ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ
ಸರ್ಕಾರದ ಅಧೀನ ಕಾರ್ಯದರ್ಶಿ,
ಅಲ್ಪಸಂಖ್ಯಾತರ ಕಲ್ಯಾಣ ಇಲಾಖು

**P.R. 504**
**S.C. 200**

## ಕಾರ್ಮಿಕ ಸಚಿವಾಲಯ

**ಸಂಖ್ಯೆ: ಕಾಇ:293:ಸ್ವಿಮರ:2014.ಬೆಂಗಳೂರು, ದಿನಾಂಕ: 13.10.2014.**

**ಅಧಿಸೂಚನೆ**

2005ರ ಮಾಹಿತಿ ಹಕ್ಕು ಅಧಿನಿಯಮ(2005ರ ಕೇಂದ್ರ ಕಾಯ್ದೆ22) ಸೆಕ್ಷನ್ 4(ಬಿ)(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಾರ್ಮಿಕ ಇಲಾಖೆಯ ಸಚಿವಾಲಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟವಾದ ಕೈಪಿಡಿ ವಿವರ ಈ ಕೆಳಗಿನಂತಿರುತ್ತದೆ.

ಕಾರ್ಮಿಕ ಸಚಿವಾಲಯದ ನಿಯಂತ್ರಣದಲ್ಲಿ ಈ ಕೆಳಗಿನ 4 ಕ್ಷೇತ್ರ ಇಲಾಖೆಗಳು ಕಾರ್ಯನಿರ್ವಹಿಸುತ್ತಿವೆ.

1. **ಕಾರ್ಮಿಕ ಇಲಾಖೆ** – ಕಾರ್ಮಿಕ ಇಲಾಖೆಯು ಕೇಂದ್ರ ಮತ್ತು ರಾಜ್ಯ ಕಾರ್ಮಿಕ ಕಾಯ್ದೆಗಳ ಆಡಳಿತ ನಿರ್ವಹಣೆ ಮತ್ತು ಜಾರಿಗೊಳಿಸುವಿಕೆಯನ್ನು ನಿರ್ವಹಿಸುತ್ತಿದೆ.
2. **ಉದ್ಯೋಗ ಮತ್ತು ತರಬೇತಿ ಇಲಾಖೆ** – ಉದ್ಯೋಗ ಮತ್ತು ತರಬೇತಿ ಇಲಾಖೆಯು ಕೈಗಾರಿಕಾ ತರಬೇತಿ ಸಂಸ್ಥೆಗಳ ಮೂಲಕ ತಾಂತ್ರಿಕ ಕ್ಷೇತ್ರದಲ್ಲಿ ಯುವ ಜನರಿಗೆ ತರಬೇತಿ ಮತ್ತು ನಿರುದ್ಯೋಗಿಗಳಿಗೆ ಉದ್ಯೋಗ ವಿನಿಮಯ ಕೇಂದ್ರಗಳ ಮೂಲಕ ಉದ್ಯೋಗ ಮಾಹಿತಿ ಮಾರ್ಗದರ್ಶನ ಹಾಗೂ ನೋಂದಣಿ ಅವಕಾಶಗಳನ್ನು ಒದಗಿಸುತ್ತಿದೆ.
3. **ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು** – ಕಾರ್ಮಿಕ ರಾಜ್ಯ ವಿಮಾ ವೈದ್ಯಕೀಯ ಸೇವೆಗಳ ಇಲಾಖೆಯು ಕಾರ್ಮಿಕರಿಗೆ ವೈದ್ಯಕೀಯೇತರ ಸೇವೆಗಳು ಹಾಗೂ ವೈದ್ಯಕೀಯ ಸೇವೆಗಳನ್ನು ಕಾರ್ಮಿಕರ ರಾಜ್ಯ ವಿಮಾ ಯೋಜನೆಯ ಮೂಲಕ ವಿಸ್ತರಿಸುತ್ತಿದೆ.
4. **ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ** – ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯು ಕಾರ್ಖಾನೆಗಳ ಕಾಯ್ದೆ ಮತ್ತು ಇಂಡಿಯನ್ ಬಾಯ್ಲರ್ ಕಾಯ್ದೆ ಹಾಗೂ ಇತರ ಕಾರ್ಮಿಕ ಕಾಯ್ದೆಗಳ ಅಡಿ ರಾಜ್ಯದಲ್ಲಿನ ಕಾರ್ಖಾನೆಗಳ ಸುರಕ್ಷತಾ ಉಸ್ತುವಾರಿ ಔದ್ಯೋಗಿಕ ಸುರಕ್ಷತೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ.

ಈ ಮೇಲಿನ 4 ಇಲಾಖೆಗಳಿಗೆ ಕಾರ್ಯ ಯೋಜನೆಯನ್ನು ರೂಪಿಸಿ ಆಯವ್ಯಯವನ್ನು ಒದಗಿಸುವುದು ಯೋಜನೆಗಳ ಪ್ರಗತಿಯ ಪರಿಶೀಲನೆ, ಇಲಾಖೆಯ ಕಾರ್ಯಗಳ ಬಗ್ಗೆ ಗಮನವಿರಿಸುವುದು, ಇಲಾಖಾಧಿಕಾರಿಗಳ ಸೇವಾ ನಿಯಂತ್ರಣ ಇತ್ಯಾದಿ ಇಲಾಖೆಯ ಮುಖ್ಯ ಕಾರ್ಯವಾಗಿರುತ್ತದೆ.

**(2)ಸಚಿವಾಲಯದ ವಿವರಗಳು:**

ಕಾರ್ಮಿಕ ಇಲಾಖೆಯ ಮಾನ್ಯ ಮಂತ್ರಿಗಳ ಹೆಸರು ಮತ್ತು ವಿಳಾಸ

**(ಅ) ಶ್ರೀ ಪಿ.ಟಿ. ಪರಮೇಶ್ವರ್ ನಾಯಕ್,**

ಮಾನ್ಯ ಕಾರ್ಮಿಕ ಇಲಾಖೆ ಸಚಿವರು, ನಂ.237, 2ನೇ ಮಹಡಿ, ವಿಧಾನಸೌಧ,

ಬೆಂಗಳೂರು–560 001. ದೂರವಾಣಿ: 080– 22258583, 22253453 (ಕಛೇರಿ),

**(ಆ) ಕಾರ್ಮಿಕ ಸಚಿವಾಲಯ ವಿಳಾಸ:**

ಅಪರ ಮುಖ್ಯ ಕಾರ್ಯದರ್ಶಿಯವರು, ನಂ. 414, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು.

ಉಪ ಕಾರ್ಯದರ್ಶಿ – 1 ರವರು, ನಂ. 411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು.

ಉಪ ಕಾರ್ಯದರ್ಶಿ– 2 ರವರು, ನಂ. 416, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು.

**ಕರ್ತವ್ಯ ಮತ್ತು ವಿಧಿಗಳು:**

ಕಾರ್ಮಿಕ ಇಲಾಖೆಯು ಮಾನ್ಯ ಕಾರ್ಮಿಕ ಸಚಿವರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಸಚಿವಾಲಯದ ಮಟ್ಟದಲ್ಲಿ ಅಪರ ಮುಖ್ಯ ಕಾರ್ಯದರ್ಶಿಯವರು ಇಲಾಖೆಯ ಆಡಳಿತವನ್ನು ನಿರ್ವಹಿಸುತ್ತಾರೆ.

**ಆಡಳಿತ ಕರ್ತವ್ಯಗಳು:**

ಕರ್ನಾಟಕ ಸರ್ಕಾರದ(ಕೆಲಸಗಳ ಹಂಚಿಕೆ)ನಿಯಮಗಳು 1977ರ ಅನುಸೂಚಿ XVIಎ ರಂತೆ ಈ ಕೆಳಕಂಡ ಕೆಲಸಗಳು ಕಾರ್ಮಿಕ ಇಲಾಖೆಗೆ ಹಂಚಿಕೆಯಾಗಿದ್ದು, ಇಲಾಖೆಯಲ್ಲಿ ಆ ವಿಷಯಗಳನ್ನು ನೋಡಿಕೊಳ್ಳಲು ವಿಶೇಷತಃ ಉಪಕಾರ್ಯದರ್ಶಿ(1) ಮತ್ತು ಉಪಕಾರ್ಯದರ್ಶಿ–2 ರವರು ನೇಮಕಗೊಂಡಿರುತ್ತಾರೆ. ಅವರು ಈ ಕೆಳಕಂಡ ವಿಷಯಗಳನ್ನು ನಿರ್ವಹಿಸುತ್ತಾರೆ.

1. ಕೆಲಸಗಾರರ ನಷ್ಟಪರಿಹಾರ, ನೌಕರರ ಹೊಣೆಗಾರಿಕೆ ಅಶಕ್ತತೆ ಮತ್ತು ವೃದ್ಧಾಪ್ಯ ವೇತನ.
2. ದುಡಿಮೆಯ ಷರತ್ತುಗಳು, ಕನಿಷ್ಠ ವೇತನ, ಭವಿಷ್ಯ ನಿಧಿ ಮತ್ತು ಕಾರ್ಮಿಕರಿಗೆ ಸೌಕರ್ಯಗಳು ಸೇರಿದಂತೆ ಕಾರ್ಮಿಕ ಕಲ್ಯಾಣ.
3. ಕೈಗಾರಿಕಾ ಮತ್ತು ಕಾರ್ಮಿಕ ವಿವಾದಗಳು, ಸಂಧಾನ ಮತ್ತು ಮಧ್ಯಸ್ಥಿಕೆ.
4. ನೌಕರರ ರಾಜ್ಯ ವಿಮೆ.
5. ಕಾರ್ಮಿಕ ಸಂಘಗಳು.
6. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ.
7. ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳು.
8. ಉದ್ಯೋಗ ವಿನಿಮಯ ಕೇಂದ್ರಗಳು ಸೇರಿದಂತೆ ರಾಷ್ಟ್ರೀಯ ಉದ್ಯೋಗ ಸೇವೆಗಳು.
9. ಕೈಗಾರಿಕಾ ತರಬೇತಿ ಸಂಸ್ಥೆಗಳು, ಕೇಂದ್ರಗಳೂ ಸೇರಿದಂತೆ ಉದ್ಯೋಗಗಳ ಷರತ್ತುಗಳಿಗೆ ಸಂಬಂಧಿಸಿದ ಎಲ್ಲ ಇತರ ವಿಷಯಗಳು.
10. ಪ್ಲಾಂಟೇಷನ್ ಕಾರ್ಮಿಕರ ಸಂಘ
11. ಸ್ಟೈಪೆಂಡರಿ ಉದ್ಯೋಗ ಯೋಜನೆಗಳು
12. ರಜಾ ಮತ್ತು ಇತರ ಪರವಾನಗಿ ವಿಷಯಗಳು
13. ಇತರ ಸೇವಾ ಮತ್ತು ಆಡಳಿತಾತ್ಮಕ ವಿಷಯಗಳು

**ಸಚಿವಾಲಯದ ಕಾರ್ಮಿಕ ಇಲಾಖೆಯ ಆಡಳಿತ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**




**ಇಲಾಖೆಗಳ ಸಾಲಿನಲ್ಲಿ ಬರುವ ಕಾರ್ಮಿಕ ಇಲಾಖೆಯು ರಾಜ್ಯ ಸರ್ಕಾರದ ಕಾರ್ಮಿಕ ಮಂತ್ರಾಲಯದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಇಲಾಖೆಯ ಕರ್ತವ್ಯಗಳು ಮತ್ತು ಪ್ರಕಾರ್ಯಗಳು ಈ ಕೆಳಗಿನಂತಿದೆ.**

- ❖ ಇಲಾಖೆಗೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನು ಈ ಸಚಿವಾಲಯವು ನೀಡುವ ಮೂಲಕ ಕಾರ್ಮಿಕ ಇಲಾಖೆಯ ಸಚಿವರಿಗೆ ನೆರವಾಗುವುದು.
- ❖ ಈ ಇಲಾಖೆಯು, ಇಡೀ ಕಾರ್ಮಿಕ ಇಲಾಖೆಯ ಆಡಳಿತಾತ್ಮಕ ನಿಯಂತ್ರಣವನ್ನು ಹೊಂದಿದೆ.
- ❖ ಕಾರ್ಮಿಕ ಇಲಾಖೆಯ 4 ಕ್ಷೇತ್ರ ಇಲಾಖೆಗಳು ಸಲ್ಲಿಸುವ ಯೋಜನೆಗಳನ್ನು ಪರಿಶೀಲಿಸಿ ಅವುಗಳನ್ನು ಅನುಷ್ಠಾನಗೊಳಿಸಲು ಯೋಜನಾ ಇಲಾಖೆ ಹಾಗೂ ಆರ್ಥಿಕ ಇಲಾಖೆಯ ಮತ್ತು ಕರ್ನಾಟಕ ಸರ್ಕಾರ (ವ್ಯವಹಾರ) ನಿಯಮಗಳಲ್ಲಿನ ಸೂಚನೆಯಂತೆ ಅವಶ್ಯಕತೆಯಿದ್ದಲ್ಲಿ ಸಚಿವ ಸಂಪುಟದ ಅನುಮೋದನೆಯನ್ನು ಪಡೆದು ಆದೇಶವನ್ನು ಹೊರಡಿಸುವುದು.
- ❖ ಕ್ಷೇತ್ರ ಇಲಾಖೆಗಳಿಗೆ ಅವಶ್ಯವಿರುವ ಆಡಳಿತಾತ್ಮಕ ವೆಚ್ಚ ಹಾಗೂ ಯೋಜನೆಗಳ ಜಾರಿಗೆ ಬೇಕಾದ ಆಯವ್ಯಯ ಅಂದಾಜು ಪ್ರತೀ ಸಾಲಿನಲ್ಲಿ ತಯಾರಿಸಿ ಆರ್ಥಿಕ ಇಲಾಖೆಗೆ ಕಳುಹಿಸಿಕೊಡುವುದು.
- ❖ ಆಯವ್ಯಯದಲ್ಲಿ ಘೋಷಿಸಲ್ಪಡುವ ಹೊಸ ಯೋಜನೆಗಳ ಜಾರಿಗೆ ಕ್ರಮವಹಿಸುವುದು.
- ❖ ಕಾರ್ಮಿಕರ ಮತ್ತು ಆಡಳಿತ ವರ್ಗದ ಸಮಸ್ಯೆಗಳಿಗೆ ಕಾರ್ಮಿಕ ಕಾಯ್ದೆ ಹಾಗೂ ನಿಯಮಗಳ ಅಡಿಯಲ್ಲಿ ಪರಿಹಾರ ಒದಗಿಸುವುದು. ಕೈಗಾರಿಕಾ ಸುರಕ್ಷತೆ ಬಗ್ಗೆ ಗಮನವಿಡುವುದು.
- ❖ ಅಸಂಘಟಿತ ಕಾರ್ಮಿಕರ ಕಲ್ಯಾಣ ಹಾಗೂ ಸುರಕ್ಷತೆಯ ಬಗ್ಗೆ ಕ್ರಮವಹಿಸುವುದು.
- ❖ ಕಾರ್ಮಿಕರಿಗೆ ಕಾರ್ಮಿಕರ ರಾಜ್ಯ ವಿಮಾ ವೈದ್ಯಕೀಯ ಸೇವೆಗಳ ಇಲಾಖೆ ಕಾಯ್ದೆಯಡಿಯಲ್ಲಿನ ಸೌಲಭ್ಯಗಳನ್ನು ಸದರಿ ಇಲಾಖೆಯ ಮೂಲಕ ಒದಗಿಸುವುದು.
- ❖ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಹಾಗೂ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಮೂಲಕ ವಿದ್ಯಾರ್ಥಿಗಳಿಗೆ ವೃತ್ತಿ ತರಬೇತಿ ನೀಡುವುದು.

- ❖ ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮದ ಮೂಲಕ ಉದ್ಯೋಗ ಮೇಳಗಳನ್ನು ನಡೆಸಿ ಜನರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವುದು, ಹಾಗೂ ಕೌಶಲ್ಯ ತರಬೇತಿಯನ್ನು ನೀಡುವುದು.
- ❖ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿ ಮತ್ತು ಕಾರ್ಮಿಕ ಕಲ್ಯಾಣ ಮಂಡಳಿಯ ಮೂಲಕ ಕಾರ್ಮಿಕರಿಗೆ ಕಲ್ಯಾಣ ಯೋಜನೆಗಳನ್ನು ಹಮ್ಮಿಕೊಂಡು ಸೌಲಭ್ಯ ಒದಗಿಸುವುದು.
- ❖ ಕ್ಷೇತ್ರ ಇಲಾಖೆಗಳ ಕಾರ್ಯ ನಿರ್ವಹಣೆ ಬಗ್ಗೆ ನಿಗಾವಹಿಸುವುದು. ಈ ಇಲಾಖೆಗಳ ಅಧಿಕಾರಿಗಳ ಸೇವಾ ವಿಷಯದ ನಿರ್ವಹಣೆ.
- ❖ ಈ ಇಲಾಖೆಯು ತನ್ನ ಪರಿವ್ಯಾಪ್ತಿಗೆ ಬರುವ ಅಂದಾಜು ಪಟ್ಟಿಗಳು ಮತ್ತು ಟೆಂಡರುಗಳಿಗೆ ಹಾಗೂ ಎಲ್ಲಾ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುತ್ತದೆ.
- ❖ ಈ ಇಲಾಖೆಯು ವಿಧಾನ ಮಂಡಲದಲ್ಲಿ ಮಂಡಿಸುವ ಇಲಾಖೆಯ ಆಯವ್ಯಯವನ್ನು ತಯಾರಿಸುತ್ತದೆ.
- ❖ ಅಧಿವೇಶನದ ಸಮಯದಲ್ಲಿ ಈ ಇಲಾಖೆಯು ವಿಧಾನ ಸಭೆಗೆ / ವಿಧಾನ ಪರಿಷತ್ತಿಗೆ ಮತ್ತು ಲೋಕ ಸಭೆ / ರಾಜ್ಯ ಸಭೆಗೆ ಮಾಹಿತಿ ಒದಗಿಸುವ ಕರ್ತವ್ಯವನ್ನು ನಿರ್ವಹಿಸುತ್ತದೆ.
- ❖ ಈ ಇಲಾಖೆಯು ಸಚಿವ ಸಂಪುಟಕ್ಕೆ ಅಗತ್ಯವಿರುವ ದಸ್ತಾವೇಜನ್ನು ಮಂಡಿಸುತ್ತದೆ. ಮತ್ತು ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ನೆರವಾಗುವುದು.
- ❖ ಈ ಇಲಾಖೆಯು ಕರಡು ಮಸೂದೆಯನ್ನು ತಯಾರಿಸುವುದು, ಸರ್ಕಾರಿ ಆದೇಶಗಳನ್ನು ಹೊರಡಿಸುವುದು, ತಿದ್ದುಪಡಿಗಳನ್ನು, ಕಾಯಿದೆ ಮತ್ತು ನಿಯಮಗಳನ್ನು ಪಾಸು ಮಾಡುವುದು.

**ಕಾರ್ಮಿಕ ಇಲಾಖಾ ಸಚಿವಾಲಯದ ಅಧಿಕಾರಿಗಳ / ಸಿಬ್ಬಂಧಿಯ ಅಧಿಕಾರ ಮತ್ತು ಕರ್ತವ್ಯಗಳ ವಿವರಗಳು:**

1. ಅಪರ ಮುಖ್ಯ ಕಾರ್ಯದರ್ಶಿ
2. ಉಪಕಾರ್ಯದರ್ಶಿ–1
3. ಉಪಕಾರ್ಯದರ್ಶಿ–2
4. ಉಪ ವಿಶೇಷಾಧಿಕಾರಿ(ಪೀಠಾಧಿಕಾರಿ–6)
5. ಅಧೀನ ಕಾರ್ಯದರ್ಶಿ(ಪೀಠಾಧಿಕಾರಿ–1)
6. ಅಧೀನ ಕಾರ್ಯದರ್ಶಿ(ಪೀಠಾಧಿಕಾರಿ–2)
7. ಅಧೀನ ಕಾರ್ಯದರ್ಶಿ(ಪೀಠಾಧಿಕಾರಿ–3)
8. ಪೀಠಾಧಿಕಾರಿ–4
9. ಪೀಠಾಧಿಕಾರಿ–5
10. ಪೀಠಾಧಿಕಾರಿ–7
11. ಸಿಬ್ಬಂಧಿ.

**ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಅಪರ ಮುಖ್ಯ ಕಾರ್ಯದರ್ಶಿಯವರ ಕಾರ್ಯಭಾರ ಕಾರ್ಮಿಕ ಇಲಾಖೆಯ ಇಡೀ ಹೊಣೆಗಾರಿಕೆಯನ್ನು ಅಪರ ಮುಖ್ಯ ಕಾರ್ಯದರ್ಶಿಗಳಿಗೆ ವಹಿಸಲಾಗಿದೆ. ಅಪರ ಮುಖ್ಯ ಕಾರ್ಯದರ್ಶಿಗಳು ನಿರ್ವಹಿಸಬೇಕಾದ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ:**

- ❖ ಇಲಾಖೆಯ ಕಾರ್ಯಕ್ರಮವನ್ನು ಮತ್ತು ಕಾರ್ಯನೀತಿಯನ್ನು ರಚಿಸುವುದು.
- ❖ ಅಧೀನ ಸಿಬ್ಬಂಧಿಯ ಸಹಕಾರ ಮತ್ತು ಸಮನ್ವಯದೊಂದಿಗೆ ಇಲಾಖೆಯಲ್ಲಿ ಸುಗಮವಾದ ಆಡಳಿತ ನಡೆಸಿಕೊಂಡು ಹೋಗಲು ಸಹಾಯ ಮಾಡುವುದು.
- ❖ ಕಾರ್ಮಿಕ ಸಚಿವರು ಅಪೇಕ್ಷಿಸಿದ ಶಾಖೆಗಳ / ವಿಭಾಗದ ವಿವರ ಮತ್ತು ಮಾಹಿತಿಯನ್ನು ನೀಡುವುದು.
- ❖ ಇಲಾಖೆಯ ಬೆಳಕು ಚೆಲ್ಲುವ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.

**ಶ್ರೀ ಇ. ಶಿವಾನಂದ., ಉಪಕಾರ್ಯದರ್ಶಿಯವರ ಕಾರ್ಯಭಾರ:–**

- ❖ ಸಚಿವಾಲಯ ಮಟ್ಟದಲ್ಲಿ ಕಾರ್ಮಿಕ ಹಾಗೂ ಉದ್ಯೋಗ ಮತ್ತು ತರಬೇತಿ ಇಲಾಖೆಗಳ ಆಡಳಿತದ ವಿಷಯವನ್ನು ನೋಡಿಕೊಳ್ಳುವುದು.
- ❖ ಕಾರ್ಮಿಕ ಇಲಾಖೆಯ ಪ್ರತಿನಿಧಿಯಾಗಿ ಕೇಂದ್ರ ಮಟ್ಟದಲ್ಲಿ GIZ ಸದಸ್ಯರಾಗಿ ಪ್ರತಿನಿಧಿಸುವುದು.
- ❖ ಅಪರ ಮುಖ್ಯ ಕಾರ್ಯದರ್ಶಿಗಳ ಸಹಕಾರದೊಂದಿಗೆ ಇಲಾಖೆಯ ಉಸ್ತುವಾರಿಯನ್ನು ಮಾಡಲು ನಿಯಮಗಳನ್ನು ಮತ್ತು ನಿಬಂಧನೆಗಳನ್ನು ರಚಿಸುವುದು.
- ❖ ಅಪರ ಮುಖ್ಯ ಕಾರ್ಯದರ್ಶಿಗಳ ಸಮನ್ವಯದೊಂದಿಗೆ ಸರ್ಕಾರದ ಮಟ್ಟದಲ್ಲಿ ನಡೆಯುವ ಮಾಸಿಕ ಸಭೆಯಲ್ಲಿ ಇಲಾಖೆಯ ಯೋಜನೆಗಳ ಭೌತಿಕ ಮತ್ತು ಆರ್ಥಿಕ ಪ್ರಗತಿಯನ್ನು ನಿಯತವಾಗಿ ಪರಾಮರ್ಶಿಸುವುದು.
- ❖ ಕಾರ್ಮಿಕ ಇಲಾಖೆಯ ಅಧಿಕಾರಿಗಳ ಸೇವಾ ವಿಷಯ, ಕಾರ್ಮಿಕ ಕಾನೂನುಗಳ ತಿದ್ದುಪಡಿ, ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು ಮತ್ತು ಪತ್ರ ಸ್ವೀಕಾರ ಮತ್ತು ರವಾನೆ ಶಾಖೆ ಹಾಗೂ ಕ್ರೋಢೀಕರಣಕ್ಕೆ ಸಂಬಂಧಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಮೇಲ್ಮನವಿ ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
- ❖ ಕಾರ್ಮಿಕ ಇಲಾಖೆಯ ಸಮನ್ವಯಾಧಿಕಾರಿ / ನೋಡಲ್ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.

**ಶ್ರೀ ಆರ್. ಶಿವಲಿಂಗಯ್ಯ, ಉಪಕಾರ್ಯದರ್ಶಿ–2 ರವರ ಕಾರ್ಯಭಾರ:**

- ❖ ಸಚಿವಾಲಯ ಮಟ್ಟದಲ್ಲಿ ಕಾರ್ಖಾನೆಗಳು ಮತ್ತು ಬಾಯ್ಲರುಗಳು ಹಾಗೂ ಕಾರ್ಮಿಕರ ರಾಜ್ಯ ವಿಮಾ ಇಲಾಖೆಗಳ ಆಡಳಿತ ವಿಷಯಗಳನ್ನು ನೋಡುವುದು.
- ❖ ಉಪ ವಿಶೇಷಾಧಿಕಾರಿ, ಅಧೀನ ಕಾರ್ಯದರ್ಶಿ(ಪೀ–1), ಅಧೀನ ಕಾರ್ಯದರ್ಶಿ(ಪೀ–2), ಮತ್ತು ಅವರ ಸಿಬ್ಬಂಧಿಯನ್ನೊಳಗೊಂಡ ಶಾಖೆಗಳ ಕೆಲಸಕಾರ್ಯಗಳ ಉಸ್ತುವಾರಿ.
- ❖ ಶಾಖೆಗಳಿಗೆ ಸಂಬಂಧಿಸಿದ ಮಾಹಿತಿ ವಿವರಗಳನ್ನು ಕಾರ್ಯದರ್ಶಿಗಳು ಬಯಸಿದಾಗ ಒದಗಿಸುವುದು. ಮತ್ತು ಅದಕ್ಕೆ ಜವಾಬ್ದಾರಿಯನ್ನು ನಿಗಧಿಪಡಿಸುವುದು.
- ❖ ಕಾರ್ಮಿಕರ ರಾಜ್ಯ ವಿಮಾ ಇಲಾಖೆ, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತಾ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು ಮತ್ತು ಕನಿಷ್ಟ ವೇತನ ನಿಗಧಿ, ಕಾರ್ಮಿಕ ನಿಯಮ ಹಾಗೂ ಕಾಯ್ದೆಗಳ ಅನುಷ್ಠಾನ ಮತ್ತು ಬಾಲ ಕಾರ್ಮಿಕ ಕೋಶಕ್ಕೆ ಸಂಬಂಧಿಸಿದ ವಿಷಯಗಳ ನಿರ್ವಹಣೆ, ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಮೇಲ್ಮನವಿ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

**ಶ್ರೀಮತಿ ಆರ್. ಸಾವಿತ್ರಿ, ಉಪ ವಿಶೇಷಾಧಿಕಾರಿ(ಪೀಠಾಧಿಕಾರಿ–6)(ಬಾಲ ಕಾರ್ಮಿಕ ಕೋಶ)ರವರ ಕಾರ್ಯಭಾರ:–**

ಇವರು ಶಾಖೆಯ ಎಲ್ಲಾ ಮೇಲ್ವಿಚಾರಣೆ ಮತ್ತು ಕರ್ನಾಟಕ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುತ್ತಾರೆ. ಇವರು ಅಪರ ಮುಖ್ಯ ಕಾರ್ಯದರ್ಶಿ / ಉಪ ಕಾರ್ಯದರ್ಶಿಗಳು(2) ಇವರ ಅಧೀನದಲ್ಲಿ ಕಾರ್ಯನಿರ್ವಹಿಸುವುದು.

- ❖ ಬಾಲ ಕಾರ್ಮಿಕ ಕೋಶದ ನಿರ್ವಹಣೆ ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
- ❖ ಶಾಖೆಗೆ ಸಂಬಂಧಿಸಿದ ಮಾಹಿತಿ ಮತ್ತು ವಿವರಗಳನ್ನು ಶಾಖೆಯ ಸಿಬ್ಬಂಧಿಯ ಸಹಕಾರದೊಂದಿಗೆ ಉಪ ಕಾರ್ಯದರ್ಶಿ(2)ರವರಿಗೆ ನೆರವಾಗುವುದು.
- ❖ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಮಂಡಿಸುವುದು.
- ❖ ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.
- ❖ ಶಾಖೆಗೆ ಬರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಅಧಿಕಾರಿ/ನೌಕರರುಗಳಿಗೆ ಹಂಚುವುದು.
- ❖ ಪ್ರತಿ ತಿಂಗಳು ಎಂ.ಎಂ.ಆರ್. ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ❖ ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ❖ ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ❖ ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀ ಬೋರಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ(ಕಾರ್ಖಾನೆ ಮತ್ತು ಬಾಯ್ಲರ್ಸ್)(ಪೀಠಾಧಿಕಾರಿ–1)ರವರ ಕಾರ್ಯಭಾರ:–**

ಇವರು ಶಾಖೆಯ ಎಲ್ಲಾ ಮೇಲ್ವಿಚಾರಣೆ ಮತ್ತು ಕರ್ನಾಟಕ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುತ್ತಾರೆ. ಅಪರ ಮುಖ್ಯ ಕಾರ್ಯದರ್ಶಿ / ಉಪಕಾರ್ಯದರ್ಶಿ–2 ಇವರುಗಳ ಅಧೀನದಲ್ಲಿ ಕಾರ್ಯನಿರ್ವಹಿಸುವುದು

- ❖ ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು ಮತ್ತು ಗುಲ್ಬರ್ಗಾ, ವಿಭಾಗಗಳಿಗೆ ಸಂಬಂಧಿಸಿದ ಕೈಗಾರಿಕಾ ವಿವಾದಗಳ ನಿರ್ವಹಣೆ. ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿ.
- ❖ ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.
- ❖ ಇಲಾಖೆಯಲ್ಲಿ ಬರುತ್ತಿರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಸಿಬ್ಬಂದಿಗಳಿಗೆ ಹಂಚುವುದು.
- ❖ ಪ್ರತಿ ತಿಂಗಳು ಎಂ.ಎಂ.ಆರ್.ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ❖ ವಿಧಾನಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ❖ ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ❖ ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀಮತಿ ಪಿ.ನಾಗರತ್ನಮ್ಮ(ಪ್ರಭಾರ), ಸರ್ಕಾರದ ಅಧೀನ ಕಾರ್ಯದರ್ಶಿ(ಕನಿಷ್ಠ ವೇತನ)(ಪೀಠಾಧಿಕಾರಿ–2) ರವರ ಕಾರ್ಯಭಾರ:–**

ಅಧೀನ ಕಾರ್ಯದರ್ಶಿ(ಪೀಠಾಧಿಕಾರಿ–2) ರವರು ಉಪಕಾರ್ಯದರ್ಶಿ(2) ಇವರ ಅಧೀನದಲ್ಲಿ ಬರುತ್ತಾರೆ. ಇವರ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ.

- ❖ ಕನಿಷ್ಟ ವೇತನ ನಿಗಧಿ ಮತ್ತು ಇತರ ಕಾರ್ಮಿಕ ಕಾನೂನುಗಳ ಅನುಷ್ಠಾನ. ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿ.
- ❖ ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.

- ಇಲಾಖೆಯಲ್ಲಿ ಬರುತ್ತಿರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಸಿಬ್ಬಂದಿಗಳಿಗೆ ಹಂಚುವುದು.
- ಪ್ರತಿ ತಿಂಗಳು ಎಂ.ಎಂ.ಆರ್.ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ವಿಧಾನಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀಮತಿ ಪಿ. ನಾಗರತ್ನಮ್ಮ, ಸರ್ಕಾರದ ಅಧೀನ ಕಾರ್ಯದರ್ಶಿ(ಸೇವಾ ವಿಷಯ) (ಪೀಠಾಧಿಕಾರಿ-3) ರವರ ಕಾರ್ಯಭಾರ:-**

ಅಧೀನ ಕಾರ್ಯದರ್ಶಿ(ಪೀಠಾಧಿಕಾರಿ-3) ರವರು ಉಪಕಾರ್ಯದರ್ಶಿ(1) ಇವರ ಅಧೀನದಲ್ಲಿ ಬರುತ್ತಾರೆ. ಇವರ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ.

- ಕಾರ್ಮಿಕ ಕಾನೂನುಗಳ ತಿದ್ದುಪಡಿ, ಕಾರ್ಮಿಕ ಇಲಾಖೆಯ ಅಧಿಕಾರಿಗಳ ಸೇವಾ ವಿಷಯ ನಿರ್ವಹಣೆ, ಕಾರ್ಮಿಕ ಕಲ್ಯಾಣ ಮಂಡಳಿ, ಕಟ್ಟಡ ಮತ್ತು ಇತರೆ ನಿರ್ಮಾಣ, ಕಾರ್ಮಿಕರ ಕಲ್ಯಾಣ ಮಂಡಳಿ, ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿಯ ವಿಷಯಗಳ ನಿರ್ವಹಣೆ ಮತ್ತು ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
- ಉಪಕಾರ್ಯದರ್ಶಿ(1) ರವರಿಗೆ ಶಾಖೆಗೆ ಸಂಬಂಧಿಸಿದ ವಿವರಗಳನ್ನು ಮತ್ತು ಮಾಹಿತಿಯನ್ನು ಸಿಬ್ಬಂದಿಯ ಸಹಕಾರದೊಂದಿಗೆ ಸಲ್ಲಿಸುವ ಮೂಲಕ ಅವರಿಗೆ ನೆರವಾಗುವುದು.
- ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.
- ಇಲಾಖೆಯಲ್ಲಿ ಬರುತ್ತಿರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಸಿಬ್ಬಂದಿಗಳಿಗೆ ಹಂಚುವುದು.
- ಪ್ರತಿ ತಿಂಗಳು ಎಂ.ಎಂ.ಆರ್.ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ವಿಧಾನಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀ ವಿ. ಪ್ರಕಾಶ್, (ಉದ್ಯೋಗ ಮತ್ತು ತರಬೇತಿ)ಪೀಠಾಧಿಕಾರಿ-4) ರವರ ಕಾರ್ಯಭಾರ:-**

ಪೀಠಾಧಿಕಾರಿ(4) ರವರು ಉಪಕಾರ್ಯದರ್ಶಿ(1) ಇವರ ಅಧೀನದಲ್ಲಿ ಬರುತ್ತಾರೆ. ಇವರ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ.

- ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
- ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮಕ್ಕೆ ಸಂಬಂಧಿಸಿದ ವಿಷಯಗಳು ಮತ್ತು ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
- ಉಪಕಾರ್ಯದರ್ಶಿ(1) ರವರಿಗೆ ಶಾಖೆಗೆ ಸಂಬಂಧಿಸಿದ ವಿವರಗಳನ್ನು ಮತ್ತು ಮಾಹಿತಿಯನ್ನು ಸಿಬ್ಬಂದಿಯ ಸಹಕಾರದೊಂದಿಗೆ ಸಲ್ಲಿಸುವ ಮೂಲಕ ಅವರಿಗೆ ನೆರವಾಗುವುದು.
- ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.
- ಇಲಾಖೆಯಲ್ಲಿ ಬರುತ್ತಿರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಸಿಬ್ಬಂದಿಗಳಿಗೆ ಹಂಚುವುದು.
- ಪ್ರತಿ ತಿಂಗಳು ಎಂ.ಎಂ.ಆರ್.ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ವಿಧಾನಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀ ವಿ.ನಾಗೇಶರಾವ್,(ಕಾ.ರಾ. ವಿ.ಯೋ ಮತ್ತು ಕೈ.ವಿ.ನಿ.)ಪೀಠಾಧಿಕಾರಿ-5 ರವರ ಕಾರ್ಯಭಾರ :-**

ಪೀಠಾಧಿಕಾರಿ(5)ರವರು ಉಪಕಾರ್ಯದರ್ಶಿ(2) ಇವರ ಅಧೀನದಲ್ಲಿ ಬರುತ್ತಾರೆ. ಇವರ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ.

- ಕಾರ್ಮಿಕರ ರಾಜ್ಯ ವಿಮಾ ಯೋಜನೆಯ ವೈದ್ಯಕೀಯ ಸೇವೆಗಳ ಇಲಾಖೆಯ ಎಲ್ಲಾ ವಿಷಯಗಳು ಮತ್ತು ಕೈಗಾರಿಕಾ ವಿವಾದ ಮತ್ತು ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿ
- ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಮಂಡಿಸುವುದು.
- ಸರ್ಕಾರದ ಆದೇಶಗಳನ್ನು ಅಧಿಕೃತವಾಗಿ ಹೊರಡಿಸುವುದು.
- ಶಾಖೆಗೆ ಬರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಅಧಿಕಾರಿ/ನೌಕರರುಗಳಿಗೆ ಹಂಚುವುದು.
- ಪ್ರತಿ ತಿಂಗಳು ಎಂ.ಎಂ.ಆರ್.ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು.
- ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶ್ರೀಮತಿ ಈ. ವಿಜಯಲಕ್ಷ್ಮಿ, (ಪತ್ರ ಸ್ವೀಮರ ಮತ್ತು ಸಮನ್ವಯ)ಪೀಠಾಧಿಕಾರಿ–7 ರವರ ಕಾರ್ಯಭಾರ:**

ಪೀಠಾಧಿಕಾರಿ(7) ರವರು ಉಪಕಾರ್ಯದರ್ಶಿ(1) ಇವರ ಅಧೀನದಲ್ಲಿ ಬರುತ್ತಾರೆ. ಇವರ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಗಿನಂತಿದೆ.

- ❖ ಸ್ವೀಕೃತಿ ಮತ್ತು ರವಾನೆ ಶಾಖೆ ಮತ್ತು ಸಮನ್ವಯಕ್ಕೆ ಸಂಬಂಧಿಸಿದ ವಿಷಯಗಳು ಹಾಗೂ ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯ್ದೆಯಡಿ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
- ❖ ಇಲಾಖೆಗೆ ಸಂಬಂಧಿಸಿದಂತೆ ಲೇಖನ ಮತ್ತು ಸಾಮಗ್ರಿಗಳನ್ನು ಖರೀದಿಸುವುದು.
- ❖ ವಾರ್ಷಿಕ ವರದಿ ತಯಾರಿಸುವುದು.
- ❖ ಶಾಖೆಗೆ ಬರುವ ಕಾಗದ ಪತ್ರಗಳನ್ನು ಸ್ವೀಕರಿಸಿ ಕೆಳಗಿನ ಅಧಿಕಾರಿ/ನೌಕರರುಗಳಿಗೆ ಹಂಚುವುದು.
- ❖ ಪ್ರತಿ ತಿಂಗಳು ಎಂ.ಎಂ.ಆರ್. ಮತ್ತು ಸಿಬ್ಬಂದಿ ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು ಹಾಗೂ ಭರವಸೆ ಸಮಿತಿ ಸಭೆಗೆ ಮಾಹಿತಿ ನೀಡುವುದು.
- ❖ ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
- ❖ ರಾಜ್ಯಪಾಲರ ಭಾಷಣ / ಮುಖ್ಯ ಮಂತ್ರಿಗಳ ಸ್ವಾತಂತ್ರ್ಯ ದಿನಾಚರಣೆ ಭಾಷಣ / ವಾರ್ಷಿಕ ಆಯವ್ಯಯ ಭಾಷಣಕ್ಕೆ ಮಾಹಿತಿಯನ್ನು ಒದಗಿಸುವುದು.
- ❖ ಸಾಮಾನ್ಯ ಆಡಳಿತವನ್ನು ನಿರ್ವಹಿಸುವುದು.
- ❖ ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಸಿಬ್ಬಂದಿಗಳ ಕಾರ್ಯಭಾರ:–**

ಸಿಬ್ಬಂದಿಯು ಇಲಾಖೆಯ ಆಧಾರ ಸ್ಥಂಭವಾಗಿರುತ್ತಾರೆ. ಸಚಿವಾಲಯದ ಕೈಪಿಡಿಯಲ್ಲಿ ನಿಗಧಿಪಡಿಸಿರುವ ಮಾನದಂಡಗಳು, ವ್ಯವಹಾರ ನಿರ್ವಹಣೆ ನಿಯಮಗಳು, ಕಾರ್ಮಿಕ ಕಾಯಿದೆ ಮತ್ತು ನಿಯಮಗಳು, ವೃಂದ ಮತ್ತು ನೇಮಕ ನಿಯಮಾವಳಿಗಳು, ಕರ್ನಾಟಕ ನಾಗರೀಕ ಸೇವಾ ನಿಯಮಗಳು ಮತ್ತು ವರ್ತನೆ ನಿಯಮಗಳು, ಸುತ್ತೋಲೆ ಮತ್ತು ಕಾಲ ಕಾಲಕ್ಕೆ ಹೊರಡಿಸಿದ ಸರ್ಕಾರಿ ಆದೇಶಗಳ ಪ್ರಕಾರ ದೈನಂದಿನ ಸರ್ಕಾರಿ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುವಲ್ಲಿ ಅವರುಗಳು ತಮ್ಮ ನಿಕಟ ಮೇಲಧಿಕಾರಿಗಳಿಗೆ ನೆರವು ನೀಡುವುದು.

**ಹಿರಿಯ ಸಹಾಯಕರ ಕಾರ್ಯಭಾರ:–**

- ❖ ವಿಷಯ ನಿರ್ವಾಹಕರು ಹಂಚಿಕೆಯಾಗಿರುವ ವಿಷಯಕ್ಕೆ ಸಂಬಂಧಿಸಿದಂತೆ ವರ್ಗಾವಣೆ/ಸ್ಥಳನಿಯುಕ್ತಿ ಹಾಗೂ ಇಲಾಖಾ ವಿಚಾರಣೆಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳ ನಿರ್ವಹಣೆ. ವಿಧಾನ ಸಭೆ/ವಿಧಾನ ಪರಿಷತ್ತು ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು ಇತರೆ ವಿಷಯಗಳು ಹಾಗೂ ಮೇಲಾಧಿಕಾರಿಗಳು ವಹಿಸುವ ಯಾವುದೇ ವಿಷಯಗಳ ಕಡತಗಳನ್ನು ನಿರ್ವಹಿಸುವುದು.
- ❖ ಹೊಸ ಕಡತಗಳನ್ನು ತೆರೆಯುವುದು. ಅವುಗಳಿಗೆ ಸಂಬಂಧಿಸಿದಂತೆ ಟಿಪ್ಪಣಿ ತಯಾರಿಸಿ ಸಲ್ಲಿಸುವುದು.
- ❖ ಸ್ವೀಕೃತಿಗಳ ಮೇಲೆ ಮೇಲಾಧಿಕಾರಿಗಳ ಸೂಚನೆಯಂತೆ ಸಂಬಂಧಿಸಿದ ಕ್ಷೇತ್ರಾಧಿಕಾರಿಗಳಿಗೆ ಕರಡು ಪತ್ರ ಮಂಡಿಸುವುದು, ಅವರಿಂದ ಮಾಹಿತಿ ಪಡೆಯುವುದು, ನೆನಪೋಲೆಗಳನ್ನು ಬರೆಯುವುದು.
- ❖ ನ್ಯಾಯಾಲಯದಲ್ಲಿ ಪ್ರಶ್ನಿಸುವ ಎಲ್ಲಾ ಪ್ರಕರಣಗಳು ಮತ್ತು ವಹಿಸಿದ ಎಲ್ಲಾ ಕಡತಗಳನ್ನು ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಸಹಾಯಕರ ಕಾರ್ಯಭಾರ:–**

- ❖ ವಿಷಯ ನಿರ್ವಾಹಕರು ಹಂಚಿಕೆಯಾಗಿರುವ ವಿಷಯಕ್ಕೆ ಸಂಬಂಧಿಸಿದಂತೆ ವರ್ಗಾವಣೆ/ಸ್ಥಳನಿಯುಕ್ತಿ ಹಾಗೂ ಇಲಾಖಾ ವಿಚಾರಣೆಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳ ನಿರ್ವಹಣೆ. ವಿಧಾನ ಸಭೆ/ವಿಧಾನ ಪರಿಷತ್ತು ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು ಇತರೆ ವಿಷಯಗಳು ಹಾಗೂ ಮೇಲಾಧಿಕಾರಿಗಳು ವಹಿಸುವ ಯಾವುದೇ ವಿಷಯಗಳ ಕಡತಗಳನ್ನು ನಿರ್ವಹಿಸುವುದು.
- ❖ ಹೊಸ ಕಡತಗಳನ್ನು ತೆರೆಯುವುದು. ಅವುಗಳಿಗೆ ಸಂಬಂಧಿಸಿದಂತೆ ಟಿಪ್ಪಣಿ ತಯಾರಿಸಿ ಸಲ್ಲಿಸುವುದು.
- ❖ ಸ್ವೀಕೃತಿಗಳ ಮೇಲೆ ಮೇಲಾಧಿಕಾರಿಗಳ ಸೂಚನೆಯಂತೆ ಸಂಬಂಧಿಸಿದ ಕ್ಷೇತ್ರಾಧಿಕಾರಿಗಳಿಗೆ ಕರಡು ಪತ್ರ ಮಂಡಿಸುವುದು, ಅವರಿಂದ ಮಾಹಿತಿ ಪಡೆಯುವುದು, ನೆನಪೋಲೆಗಳನ್ನು ಬರೆಯುವುದು.
- ❖ ನ್ಯಾಯಾಲಯದಲ್ಲಿ ಪ್ರಶ್ನಿಸುವ ಎಲ್ಲಾ ಪ್ರಕರಣಗಳು ಮತ್ತು ವಹಿಸಿದ ಎಲ್ಲಾ ಕಡತಗಳನ್ನು ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಕಿರಿಯ ಸಹಾಯಕ ಕಾರ್ಯಭಾರ:–**

- ❖ ಶಾಖೆಯಲ್ಲಿ ಬರುವ ಎಲ್ಲಾ ಕಾಗದ ಪತ್ರಗಳನ್ನು ಸ್ವೀಕರಿಸುವುದು.
- ❖ ಸ್ವೀಕರಿಸಿದ ಕಡತಗಳನ್ನು ಹಾಗೂ ಕಾಗದ ಪತ್ರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು, ನಂತರ ಅವುಗಳನ್ನು ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ನೀಡುವುದು, ಕಡತಗಳಲ್ಲಿ ಪತ್ರಗಳನ್ನು ರವಾನಿಸುವುದು.
- ❖ ಮಾಸಿಕ ವರದಿಯನ್ನು ತಯಾರಿಸುವುದು.
- ❖ ಗಣಕಯಂತ್ರದ ಮೂಲಕ ಎಲ್.ಎಂ.ಎಸ್/ಎಫ್.ಎಂ.ಎಸ್.ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಶೀಘ್ರಲಿಪಿಗಾರರ ಕಾರ್ಯಭಾರ:–**

- ಶೀಘ್ರಲಿಪಿಗಾರರು ಅವರಿಗೆ ವಹಿಸಿದ ಅಧಿಕಾರಿಗಳಿಂದ ಉಕ್ತಲೇಖನವನ್ನು ಪಡೆದು ಪತ್ರಗಳನ್ನು ಮತ್ತು ವರದಿಗಳನ್ನು ತಯಾರಿಸಿ ಆಯಾ ಅಧಿಕಾರಿಗಳಿಗೆ ಸಲ್ಲಿಸುವುದು.
- ಅಧಿಕಾರಿಗಳಿಗೆ ಬರುವ ಕಾಗದ ಪತ್ರಗಳು ಹಾಗೂ ಕಡತಗಳನ್ನು ಸ್ವೀಕರಿಸುವುದು.
- ಸಭೆ/ಸಮಿತಿಗಳ ದಿನಾಂಕಗಳನ್ನು ಗುರುತಿಸಿ, ಅಧಿಕಾರಿಗಳಿಗೆ ನೆನಪಿಸುವುದು ಹಾಗೂ ಕಡತಗಳನ್ನು ಪಡೆದು ಸಲ್ಲಿಸುವುದು.
- ಸಭೆ/ಸಮಿತಿಗಳಲ್ಲಿ ನಡವಳಿಗಳನ್ನು ತೆಗೆದುಕೊಂಡು ಕರಡನ್ನು ತಯಾರಿಸುವುದು.
- ಗಣಕಯಂತ್ರದ ಮೂಲಕ ಎಲ್.ಎಂ.ಎಸ್/ಎಫ್.ಎಂ.ಎಸ್. ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ಬೆರಳಚ್ಚುಗಾರರ ಕಾರ್ಯಭಾರ:–**

- ಬೆರಳಚ್ಚುಗಾರರು ಶಾಖೆಗೆ ಸಂಬಂಧಿಸಿದ ಪತ್ರ ವ್ಯವಹಾರಗಳ ಪತ್ರಗಳನ್ನು ಬೆರಳಚ್ಚಿಸುವ ಕೆಲಸ ನಿರ್ವಹಿಸುವುದು.
- ಮೇಲಧಿಕಾರಿಗಳು ಸೂಚಿಸಿದ ಕಛೇರಿಯ ಇನ್ನಿತರೆ ಕೆಲಸ ವಹಿಸುವುದು.
- ಗಣಕಯಂತ್ರದ ಮೂಲಕ ಎಲ್.ಎಂ.ಎಸ್./ಎಫ್.ಎಂ.ಎಸ್. ನಿರ್ವಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ದಲಾಯತ್:–**

- ಇವರು ಕಛೇರಿಗಳನ್ನು ಸ್ವಚ್ಚವಾಗಿಡುವುದು.
- ಪತ್ರಗಳನ್ನು ಮತ್ತು ಕಡತಗಳನ್ನು ವಿವಿಧ ಶಾಖೆಗಳಿಗೆ / ಇಲಾಖೆಗಳಿಗೆ ನಿಯಮಾನುಸಾರ ನೀಡುವುದು.
- ಮುಕ್ತಾಯಗೊಳಿಸಿದ ಕಡತಗಳನ್ನು ಸರಿಯಾಗಿ ಹೊಲಿದು ದಾಖಲೆಗಳ ಕೊಠಡಿಗೆ ಕಳುಹಿಸುವುದು.
- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**(3)ನಿರ್ಣಯ ತೆಗೆದುಕೊಳ್ಳುವ ಪ್ರಕ್ರಿಯೆ, ಉಸ್ತುವಾರಿ ಮತ್ತು ಹೊಣೆಗಾರಿಕೆ ಹಾಗೂ ವಿವಿಧ ಹಂತಗಳು:–**

ಅಪರ ಮುಖ್ಯ ಕಾರ್ಯದರ್ಶಿಯವರು ಕಾರ್ಮಿಕ ಇಲಾಖೆಯ ಸಚಿವರ ಸಮನ್ವಯ ಮತ್ತು ಸಹಕಾರದೊಂದಿಗೆ ಕಾರ್ಮಿಕ ಇಲಾಖೆಯ ನಿರ್ಣಯ ತೆಗೆದುಕೊಳ್ಳುವ ಪ್ರಕ್ರಿಯೆಗೆ ಸಂಬಂಧಪಟ್ಟವರಾಗಿರುತ್ತಾರೆ.

ಸಂಘಟನೆಯ ವಿವರಗಳಂತೆ ಅಪ್ಪಣೆ / ಆದೇಶ ಮಾಡುವಲ್ಲಿ ಏಕತೆ ಇದೆ. ಅಧೀನ ಕಾರ್ಯದರ್ಶಿಗಳು ಮತ್ತು ಪೀಠಾಧಿಕಾರಿಗಳು ಸಂಬಂಧಪಟ್ಟ ಉಪ ಕಾರ್ಯದರ್ಶಿಗಳಿಂದ ಆದೇಶಗಳನ್ನು ಪಡೆಯುತ್ತಾರೆ. ಪ್ರತಿಯಾಗಿ ಅವರು ಕಾರ್ಯದರ್ಶಿಗಳಿಗೆ ಹೊಣೆಗಾರರಾಗಿರುತ್ತಾರೆ. ಅಪರ ಮುಖ್ಯ ಕಾರ್ಯದರ್ಶಿಯವರು ಕಾರ್ಮಿಕ ಇಲಾಖೆಯ ಸಚಿವರಿಗೆ ಹೊಣೆಗಾರರಾಗಿರುತ್ತಾರೆ.

**(4)ಇಲಾಖೆಯ ಕೆಲಸಕಾರ್ಯಗಳ ನಿರ್ವಹಣೆಗೆ ಇಲಾಖೆಯು ಅಳವಡಿಸಿಕೊಂಡಿರುವ ಮಾನದಂಡಗಳು:–**

ಸಚಿವಾಲಯದ ಕೈಪಿಡಿಯು ಕಾರ್ಮಿಕ ಇಲಾಖೆಯ ದೈನಂದಿನ ಚಟುವಟಿಕೆಗಳಿಗೆ ಮಾರ್ಗದರ್ಶನವಾಗಿದೆ. ಸಚಿವಾಲಯದ ಕೈಪಿಡಿಯು ವಿಸ್ತೃತವಾದ ಮಾನದಂಡಗಳನ್ನು ಒಳಗೊಂಡಿದ್ದು ಕಾರ್ಮಿಕ ಇಲಾಖೆಯ ಸಿಬ್ಬಂದಿಯು ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸುವಾಗ ಸದರಿ ಮಾನದಂಡಗಳನ್ನು ಅನುಸರಿಸಬೇಕಾಗುತ್ತದೆ. ಸಚಿವಾಲಯದ ಕೈಪಿಡಿಯಲ್ಲದೇ ಸಚಿವಾಲಯದ ಸಿಬ್ಬಂದಿಯು ಅಸ್ತಿತ್ವದಲ್ಲಿರುವ ಇತರೇ ಸಂಹಿತೆ ಮತ್ತು ನಿಯಮಗಳಲ್ಲಿನ ಪ್ರಾವಿಧಾನಗಳನ್ನು(Provision) ಅನುಸರಿಸಬೇಕಾಗುತ್ತದೆ.

**(5)ಕೆಲಸ ಕಾರ್ಯಗಳ ನಿರ್ವಹಣೆಗೆ ನಿಯಮಗಳು, ವಿನಿಮಯಗಳು(Regulations), ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು ಕಾರ್ಮಿಕ ಇಲಾಖೆಯ ನಿಯಂತ್ರಣದಲ್ಲಿರುತ್ತವೆ:–**

ಇಲಾಖೆಯು ಪ್ರಮುಖವಾಗಿ ಸಚಿವಾಲಯದ ಕೈಪಿಡಿ ಮತ್ತು ಕರ್ನಾಟಕ ಸರ್ಕಾರಿ[ವ್ಯವಹಾರಗಳು] ನಿಯಮಗಳು–1977 ರ ಪ್ರಕಾರ ಸುತ್ತೋಲೆ ಮತ್ತು ಕಾಲ ಕಾಲಕ್ಕೆ ಹೊರಡಿಸಿದ ಸರ್ಕಾರಿ ಆದೇಶಗಳ ಮೂಲಕ ಕಾರ್ಯ ನಿರ್ವಹಿಸುತ್ತಿದೆ. ಇದಲ್ಲದೆ ಈ ಕೆಳಕಂಡ ನಿಯಮಗಳು / ಕಾಯಿದೆಗಳ ಪ್ರಕಾರ ಕಾರ್ಯ ನಿರ್ವಹಣೆಯನ್ನು ಮಾಡಲಾಗುತ್ತದೆ.

1. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958
2. ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ] ನಿಯಮವಾಳಿಗಳು 1957
3. ಕರ್ನಾಟಕ ನಾಗರೀಕ ಸೇವಾ ನಡತೆ ನಿಯಮಾವಳಿಗಳು 1966
4. ಕರ್ನಾಟಕ ನಾಗರೀಕ ಸೇವಾ [ನೇರ ನೇಮಕಾತಿ] ನಿಯಮಾವಳಿಗಳು 1977
5. ಕರ್ನಾಟಕ ನಾಗರೀಕ ಸೇವಾ [ಖಾಯಂ ಪೂರ್ವಾವಧಿ] ನಿಯಮಾವಳಿಗಳು 1977
6. ಕರ್ನಾಟಕ ನಾಗರೀಕ ಸೇವಾ [ಜೇಷ್ಟತೆ] ನಿಯಮಾವಳಿಗಳು
7. ಕರ್ನಾಟಕ ನಾಗರೀಕ ಸೇವಾ [ಆರ್.ಪಿ.ಪಿ] ಅಧಿನಿಯಮ ಮತ್ತು ನಿಯಮಗಳು
8. ಕರ್ನಾಟಕ ಪಾರದರ್ಶಕತೆ ಅಧಿನಿಯಮ
9. ಕರ್ನಾಟಕ ಲೋಕ ಸೇವಾ ವಿನಿಯಮಗಳು

10. ಹೆರಿಗೆ ಭತ್ಯೆ ಕಾಯ್ದೆ 1961 ಮತ್ತು ನಿಯಮ 1963
11. ಕಾರ್ಖಾನೆಗಳ ಕಾಯ್ದೆ 1948
12. ಕರ್ನಾಟಕ ಕಾರ್ಖಾನೆ ನಿಯಮಗಳು, 1969
13. ಇಂಡಿಯನ್ ಬಾಯ್ಲರ್‌ಗಳ ಸಕ್ರಮ ಕಾಯ್ದೆ 1923
14. ಇಂಡಿಯನ್ ಬಾಯ್ಲರ್‌ಗಳ ಸಕ್ರಮ ಕಾಯ್ದೆ 1950
15. ಕರ್ನಾಟಕ ಬಾಯ್ಲರ್‌ಗಳ ಪರಿಚಾರಕ ಕಾಯ್ದೆ 1962
16. ಕರ್ನಾಟಕ ಬಾಯ್ಲರ್ಸ್ ನಿಯಮಗಳು 1982
17. ಕಾರ್ಖಾನೆ ಮತ್ತು ಬಾಯ್ಲರ್ ಇಲಾಖೆಯ ಸೇವಾ ವಿಷಯಗಳು
18. ಕನಿಷ್ಠ ವೇತನ ಕಾಯ್ದೆ 1948
19. ಗುತ್ತಿಗೆ ಕಾರ್ಮಿಕರ [ನಿಯಂತ್ರಣ ಮತ್ತು ರದ್ದತಿ] ಕಾಯ್ದೆ 1970
20. ಭವಿಷ್ಯ ನಿಧಿ ಕಾಯಿದೆ
21. ಬೀಡಿ ಮತ್ತು ಸಿಗಾರ್ ಕಾರ್ಮಿಕರ [ಉದ್ಯೋಗ ನಿಯಮಗಳು] ಕಾಯ್ದೆ 1966
22. ಮೋಟಾರು ಸಾರಿಗೆ ಕಾರ್ಮಿಕರ ಕಾಯ್ದೆ 1961
23. ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ 1961
24. ಕರ್ನಾಟಕ ಕೈಗಾರಿಕಾ ಸ್ಥಾಪನೆ [ರಾಷ್ಟ್ರೀಯ ಮತ್ತು ಹಬ್ಬದ ರಜಾ ದಿನಗಳು] ಕಾಯ್ದೆ 1963
25. ಉಪಧನ ಪಾವತಿ ಕಾಯ್ದೆ 1972
26. ವೇತನ ಪಾವತಿ ಕಾಯ್ದೆ 1936
27. ಸಮಾನ ವೇತನ ಕಾಯ್ದೆ 1976
28. ಅಂತರರಾಜ್ಯ ವಲಸೆ ಕೆಲಸಗಾರರ [ಉದ್ಯೋಗ ನಿಯಂತ್ರಣ ಮತ್ತು ಸೇವಾ ಷರತ್ತುಗಳು] ಅಧಿನಿಯಮ ಕಾಯ್ದೆ 1979.
29. ತೋಟ ಕಾರ್ಮಿಕರ ಕಾಯ್ದೆ 1951
30. ಮಾರಾಟ ಪ್ರತಿನಿಧ ಕಾಯ್ದೆ
31. ಟ್ರೇಡ್ ಯೂನಿಯನ್ ಕಾಯ್ದೆ 1926
32. ಕಾರ್ಯನಿರತ ಪತ್ರಕರ್ತರ [ವೇತನ ನಿಗದಿ] ಕಾಯ್ದೆ 1958
33. ಕಾರ್ಮಿಕ ಕಾಯಿದೆಗಳ [ಕೆಲವು ಸಂಸ್ಥೆಗಳ ವರದಿಗಳನ್ನು ಮತ್ತು ವಹಿಗಳನ್ನು ಇಡುವ ಬಗ್ಗೆ ವಿನಾಯಿತಿ] ಕಾಯ್ದೆ 1958
34. ಅಸಂಘಟಿತ ಕಾರ್ಮಿಕ ಕಲ್ಯಾಣ ಕಾಯ್ದೆ ಬೋನಸ್ ಪಾವತಿ ಕಾಯ್ದೆ 1965
35. ಕಾರ್ಯನಿರತ ಪತ್ರಕರ್ತರ [ಸೇವಾ ಷರತ್ತುಗಳು ಮತ್ತು ಇತರೆ ಅನುಕೂಲತೆ] ಕಾಯ್ದೆ 1958.
36. ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ 1965 ಮತ್ತು ನಿಯಮ 1968
37. ಅನುಕಂಪದ ಆಧಾರಿತ ನೌಕರಿ ನಿಯಮಗಳು.
38. ಬಾಲ ಕಾರ್ಮಿಕ [ನಿರ್ಮೂಲನ ಮತ್ತು ನಿಯಂತ್ರಣ] ಅಧಿನಿಯಮ, 1986.
39. ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ 2005

**(6) ಕಾರ್ಮಿಕ ಇಲಾಖೆಯ ನಿಯಂತ್ರಣದಲ್ಲಿ ಬರುವ ದಸ್ತಾವೇಜುಗಳು:–**

ಈ ಕೆಳಕಂಡ ದಸ್ತಾವೇಜುಗಳು ಸಚಿವಾಲಯದ ಕಾರ್ಮಿಕ ಇಲಾಖೆಯ ನಿಯಂತ್ರಣದಲ್ಲಿ ಬರುತ್ತವೆ. ಅವುಗಳನ್ನು ವಾರ್ಷಿಕವಾಗಿ ಪ್ರಕಟಿಸಲಾಗುತ್ತದೆ.

- ❖ ವಾರ್ಷಿಕ ವರದಿ
- ❖ ನಿರ್ವಹಣಾ ಮುಂಗಡ ಪತ್ರ
- ❖ ವಾರ್ಷಿಕ ಆಡಳಿತಾತ್ಮಕ ವರದಿ
- ❖ ವಾರ್ಷಿಕ ಯೋಜನೆ
- ❖ ಆಯವ್ಯಯ ದಸ್ತಾವೇಜು

**ವಾರ್ಷಿಕ ವರದಿ:–** ಈ ದಸ್ತಾವೇಜನ್ನು ಸಚಿವಾಲಯದ ಕಾರ್ಮಿಕ ಇಲಾಖೆಯಿಂದ ವಾರ್ಷಿಕವಾಗಿ ಪ್ರಕಟಿಸಲಾಗುತ್ತದೆ. ಈ ದಸ್ತಾವೇಜನ್ನು ಇಡೀ ಇಲಾಖೆಯ ಆರ್ಥಿಕ ಮತ್ತು ಭೌತಿಕ ಕಾರ್ಯಕ್ರಮಗಳನ್ನು ಮತ್ತು ಪ್ರಗತಿಯನ್ನು ಹಾಗೂ ಮುಂದಿನ ವರ್ಷದ ಕಾರ್ಯಕ್ರಮಗಳನ್ನು ಒಳಗೊಂಡಿರುತ್ತದೆ. ಇದಲ್ಲದೇ ಇದು ಪ್ರಗತಿಯಲ್ಲಿರುವ ಪ್ರತಿಯೊಂದು ಕಾಮಗಾರಿ ಯೋಜನೆಯ ಹಂತವನ್ನು ಒಳಗೊಂಡಿರುತ್ತದೆ.

**ನಿರ್ವಹಣಾ ಮುಂಗಡ ಪತ್ರ:–** ಭಾರತ ಸರ್ಕಾರದ ಆಡಳಿತಾತ್ಮಕ ಸುಧಾರಣೆಗಳ ಆಯೋಗವು 1977–78 ರಲ್ಲಿ ಶಿಫಾರಸ್ಸು ಮಾಡಿದ ಮೇರೆಗೆ ಈ ದಸ್ತಾವೇಜನ್ನು ಪರಿಚಯಿಸಲಾಗಿತ್ತು. ಈ ದಸ್ತಾವೇಜು, ಇಲಾಖೆಯ ಪ್ರತಿಯೊಂದು ಕಾರ್ಯಕ್ರಮ ಮತ್ತು ಚಟುವಟಿಕೆಯಡಿಯಲ್ಲಿ ಸಲ್ಲಿಸಿದ ಸೇವೆಗಳು

ಹಾಗೂ ಪ್ರತಿಯೊಂದು ವಲಯವು ಕಾರ್ಯಗತಗೊಳಿಸಿದ ಕಾಮಗಾರಿಯ ಪ್ರಮಾಣ, ಹಲವು ಕಾರ್ಯಕ್ರಮಗಳ ಮತ್ತು ಚಟುವಟಿಕೆಗಳ ಅಂದಾಜು ವೆಚ್ಚ ಮತ್ತು ಯಾವ ಉದ್ದೇಶಗಳಿಗೆ ಮತ್ತು ಗುರಿಗಳಿಗೆ ನಿಧಿಗಳು ಅಗತ್ಯವಿದೆ ಎಂಬುದನ್ನು ಸಾದರಪಡಿಸುತ್ತದೆ.

**ವಾರ್ಷಿಕ ಆಡಳಿತಾತ್ಮಕ ವರದಿ:–** ಈ ದಸ್ತಾವೇಜನ್ನು ವಾರ್ಷಿಕವಾಗಿ ಪ್ರಕಟಿಸಲಾಗುತ್ತದೆ. ಇದು ಪ್ರತಿಯೊಂದು ವಲಯಗಳ ಸಂಘಟನೆಯ ಬಗ್ಗೆ ವಿವರಗಳನ್ನು ಒಳಗೊಂಡಿರುತ್ತದೆ. ಆಡಳಿತಾತ್ಮಕ ವರದಿಯಲ್ಲಿ ಸಚಿವಾಲಯದ ಮತ್ತು ಪ್ರತಿಯೊಂದು ವಲಯಗಳ ಇಲಾಖಾ ಮುಖ್ಯಸ್ಥರು ಹೊಂದಿದ ಹುದ್ದೆಯ ಅವಧಿಯನ್ನು ಇದರಲ್ಲಿ ಸೂಚಿಸಲಾಗಿರುತ್ತದೆ.

**ವಾರ್ಷಿಕ ಯೋಜನೆ:–** ಈ ದಸ್ತಾವೇಜು, ಯೋಜನಾವಾರು ಮತ್ತು ಶೀರ್ಷಿಕೆವಾರು ಇಲಾಖೆಗೆ ಅಗತ್ಯವಾಗಿ ಬೇಕಾಗಿರುವ ನಿಧಿಗಳ ಬಗ್ಗೆ ವಿವರವಾದ ಮಾಹಿತಿಯನ್ನು ಒಳಗೊಂಡಿರುತ್ತದೆ. ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸುವಲ್ಲಿ ಕಾರ್ಮಿಕ ಇಲಾಖೆಯು ಯೋಜನಾ ಇಲಾಖೆಗೆ ಸಹಕರಿಸುತ್ತದೆ. ಈ ದಸ್ತಾವೇಜು, ಮುಂದುವರೆದ ಮತ್ತು ಹೊಸ ಯೋಜನೆಗಳೆರಡನ್ನು ಸೇರಿದಂತೆ ಪ್ರತಿ ಯೋಜನಾ ಅವಧಿಯಲ್ಲಿ ಹಂಚಿಕೆ ಮಾಡಿದ ನಿಧಿಗಳ ಬಗ್ಗೆ ಸಂಪೂರ್ಣವಾದ ವಿವರಗಳನ್ನು ನೀಡುತ್ತದೆ.

**ಆಯವ್ಯಯ ದಸ್ತಾವೇಜು:–** ಇದೊಂದು ಕರಡು ದಸ್ತಾವೇಜಾಗಿದೆ. ಇದನ್ನು ಯೋಜನಾ ಇಲಾಖೆಯು ಬಿಡುಗಡೆ ಮಾಡಿದ ತರುವಾಯ ಇಲಾಖೆಯ ವಾರ್ಷಿಕ ಯೋಜನೆಯನ್ನು ಪ್ರಕಟಿಸಲಾಗುತ್ತದೆ. ಇದು ಇಲಾಖೆಯು ನಡೆಸಿದ ಪೂರ್ವಭಾವಿ ಸಭೆಗಳಲ್ಲಿ ನಿಧಿಗಳ ಅಗತ್ಯತೆಗಳ ಬಗ್ಗೆ ಚರ್ಚಿತಗೊಂಡ ತರುವಾಯ ಆಯವ್ಯಯದ ದಸ್ತಾವೇಜನ್ನು ತಯಾರಿಸಿ ಆರ್ಥಿಕ ಇಲಾಖೆಗೆ ಕಳುಹಿಸಲಾಗುತ್ತದೆ. ಈ ದಸ್ತಾವೇಜು ವಾಸ್ತವವಾಗಿ ಅಗತ್ಯವಿರುವ ನಿಧಿಗಳ ಬಗ್ಗೆ ಮಾಹಿತಿಯನ್ನೊಳಗೊಂಡಿರುತ್ತದೆ.

**(7)ಕಾರ್ಮಿಕ ಇಲಾಖೆಗೆ ಅನ್ವಯಿಸುವ ಕಾರ್ಯ ನೀತಿಯ ರಚನೆ ಮತ್ತು ಕಾರ್ಯಾನುಷ್ಠಾನದ ಸಂಬಂಧ ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ವ್ಯವಸ್ಥೆ:–**

ನಿಗಧಿತ ಕಾರ್ಮಿಕ ಸಾಮರ್ಥ್ಯವನ್ನು ಸೃಜಿಸಲು ಮತ್ತು ಮುಂದುವರೆದ ಕಾರ್ಮಿಕ ಯೋಜನೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಕಾರ್ಮಿಕ ಇಲಾಖೆಯಡಿಯಲ್ಲಿ ಕಾರ್ಮಿಕ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಆಯುಕ್ತರು ಮತ್ತು ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ನಿರ್ದೇಶನಾಲಯ ಎಂಬ ಮೂರು ವಿಶೇಷ ಉದ್ದೇಶ ವಾಹಕಗಳನ್ನು(Special Purpose Vehicles) ಸ್ಥಾಪಿಸಲಾಗಿದೆ. ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರು ಈ ಮೂರು ನಿಗಮಗಳಿಗೆ ನಿರ್ದೇಶಕರಾಗಿರುತ್ತಾರೆ. ಕಾರ್ಯನೀತಿಗಳನ್ನು ರಚಿಸುವಾಗ ಮತ್ತು ಅನುಷ್ಠಾನಗೊಳಿಸುವಾಗ ಈ ಮೂರು ಆಯುಕ್ತರು ನೀಡಿದಂತಹ ಸಲಹೆಗಳನ್ನು ಪರಿಗಣಿಸಲಾಗುತ್ತದೆ.

**(8) ಕಾರ್ಮಿಕ ಇಲಾಖೆಯಿಂದ ರಚಿಸಲ್ಪಟ್ಟ ಮಂಡಳಿಗಳು, ಪರಿಷತ್ತುಗಳು(Councils) ಸಮಿತಿಗಳು ಮತ್ತು ಇತರೆ ನಿಕಾಯಗಳು( bodies):–**

ಅಧಿಕಾರೇತರ ಮತ್ತು ಅಧಿಕಾರವುಳ್ಳ ಸದಸ್ಯರನ್ನೊಳಗೊಂಡಂತೆ ಕಾರ್ಮಿಕ ಇಲಾಖೆಯು ಹಲವಾರು ಮಂಡಳಿಗಳನ್ನು, ಕೌನ್ಸಿಲ್‌ಗಳನ್ನು, ಸಮಿತಿಗಳನ್ನು ಮತ್ತು ನಿಕಾಯಗಳನ್ನು ಸ್ಥಾಪಿಸಿದೆ.

ಕಾರ್ಮಿಕ ಇಲಾಖೆಯು ಸ್ಥಾಪಿಸಲ್ಪಟ್ಟಂತಹ ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಮತ್ತು ನಿಕಾಯಗಳು ಈ ಕೆಳಗಿನಂತಿವೆ.

- ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿ
- ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ
- ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ
- ಕರ್ನಾಟಕ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ
- ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ

**ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿ:–**

ಕನಿಷ್ಟ ವೇತನ ಕಾಯ್ದೆ 1948ರ ಕಲಂ 7 & 9ರ ಅಡಿಯಲ್ಲಿ ದಿನಾಂಕ: 18–05–2012 ರಂದು ರಚಿಸಲಾಗಿದೆ. ಕಾರ್ಮಿಕ ಆಯುಕ್ತರು ಈ ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ಅಧ್ಯಕ್ಷರನ್ನು ಹೊರತುಪಡಿಸಿ 6 ಮಂದಿ ಸ್ವತಂತ್ರ ಸದಸ್ಯರು 7 ಮಂದಿ ಮಾಲೀಕರ ಪ್ರತಿನಿಧಿಗಳು ಮತ್ತು 7 ಮಂದಿ ಕಾರ್ಮಿಕ ಪ್ರತಿನಿಧಿಗಳು ಮಂಡಳಿಯಲ್ಲಿರುತ್ತಾರೆ. ಕನಿಷ್ಟ ವೇತನ ಕಾಯ್ದೆಯಡಿಯಲ್ಲಿ ಅನುಸೂಚಿತ ಉದ್ದಿಮೆಗಳಿಗೆ ಸಂಬಂಧಿಸಿದಂತೆ ಕನಿಷ್ಟ ವೇತನವನ್ನು ನಿಗಧಿಪಡಿಸುವುದು ಹಾಗೂ ಕಾಲಕಾಲಕ್ಕೆ ಕನಿಷ್ಟ ವೇತನದ ಪರಿಷ್ಕರಣೆಯ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದಾಗಿದೆ.

**ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ:–**

ಕಂಪನಿ ಅಧಿನಿಯಮ 1956ರ ನಿಯಮ 619ರ ಅಡಿಯಲ್ಲಿ ದಿನಾಂಕ: 02–04–2008ರಂದು ರಚಿಸಲಾಗಿದೆ. ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರು ಅಧ್ಯಕ್ಷರಾಗಿರುತ್ತಾರೆ. ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರು ಕಾರ್ಯ ನಿರ್ವಾಹಕ ನಿರ್ದೇಶಕರಾಗಿರುತ್ತಾರೆ. 6 ಮಂದಿ ಇತರೆ ಸದಸ್ಯರು ಈ ನಿಗಮದಲ್ಲಿರುತ್ತಾರೆ. ಈ ನಿಗಮವು ನಿರುದ್ಯೋಗಿಗಳಿಗೆ ಕೌಶಲ್ಯ ತರಬೇತಿ ನೀಡುವ ಹಾಗೂ ಉದ್ಯೋಗ ಮೇಳಗಳ ಮೂಲಕ ಉದ್ಯೋಗ ದೊರಕಿಸುವ ಕಾರ್ಯವನ್ನು ನಿರ್ವಹಿಸುತ್ತದೆ.

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:–**

ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ 1965ರ ಪ್ರಕರಣ 4ರ ಅಡಿಯಲ್ಲಿ 1969ರಲ್ಲಿ ರಚಿಸಲಾಗಿದೆ. ಮಾನ್ಯ ಕಾರ್ಮಿಕ ಸಚಿವರು ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ಅಧಿಕಾರಿ ಸದಸ್ಯರು 3 ಮಂದಿ 4 ಮಂದಿ ಕಾರ್ಮಿಕರ ಪ್ರತಿನಿಧಿಗಳು 4 ಮಂದಿ ಉದ್ಯೋಗದಾತರ ಪ್ರತಿನಿಧಿಗಳು ಮತ್ತು ಇಬ್ಬರು ಮಹಿಳಾ ಸದಸ್ಯರು ಈ ಮಂಡಳಿಯಲ್ಲಿರುತ್ತಾರೆ. ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ನಿಯಮವಾಳಿಗಳ 1965ರಡಿಯಲ್ಲಿ ನಿಗಧಿಪಡಿಸಿರುವ ಸೌಲಭ್ಯಗಳನ್ನು ಕಾರ್ಮಿಕರಿಗೆ ಒದಗಿಸುವುದು.

**ಕರ್ನಾಟಕ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:–**

ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ [ಉದ್ಯೋಗ ಕ್ರಮೀಕರಣ ಮತ್ತು ಸೇವಾ ಷರತ್ತುಗಳು] ನಿಯಮಾವಳಿಗಳು 2006ರ ನಿಯಮ 22ಎ ಅಡಿ ದಿ: 18–01–2007ರಂದು ರಚಿಸಲಾಗಿದೆ. ಮಾನ್ಯ ಕಾರ್ಮಿಕ ಸಚಿವರು ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಪ್ರತಿನಿಧಿಗಳು 4 ಮಂದಿ ಮತ್ತು ಕಟ್ಟಡ ಮತ್ತು ಇತರೆ ನಿರ್ಮಾಣಗಾರರ ಪ್ರತಿನಿಧಿಗಳು 4 ಮಂದಿ ಅಧಿಕಾರಿ ಸದಸ್ಯರು 4 ಮಂದಿ ಮಂಡಳಿಯಲ್ಲಿರುತ್ತಾರೆ. ಮಂಡಳಿಯು ನೊಂದಾಯಿತ ಫಲಾನುಭವಿಗಳಿಗೆ ನಿಯಮಗಳಲ್ಲಿ ಸೂಚಿತವಾಗಿರುವ ಸೌಲಭ್ಯಗಳನ್ನು ಮತ್ತು ಸುರಕ್ಷತೆಗಳನ್ನು ಒದಗಿಸುವ ನಿಟ್ಟಿನಲ್ಲಿ ನಿಗಾವಹಿಸುತ್ತದೆ.

**ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:–**

ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಅಧಿನಿಯಮ 2008ರ ಅಡಿಯಲ್ಲಿ ದಿ: 05–10– 2009ರಂದು ರಚಿಸಲಾಗಿದೆ. ಮಾನ್ಯ ಕಾರ್ಮಿಕ ಸಚಿವರು ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. 7 ಮಂದಿ ಅಧಿಕಾರಿ ಸದಸ್ಯರು, 7 ಮಂದಿ ಅಸಂಘಟಿತ ಕಾರ್ಮಿಕರ ಪ್ರತಿನಿಧಿಗಳು, 7 ಮಂದಿ ಉದ್ಯೋಗದಾತರ ಪ್ರತಿನಿಧಿಗಳು, 5 ಮಂದಿ ಸಾರ್ವಜನಿಕ/ನಾಗರೀಕ ವ್ಯಕ್ತಿಗಳು ಇಬ್ಬರು ವಿಧಾನ ಸಭಾ/ಪರಿಷತ್ ಸದಸ್ಯರು ಮಂಡಳಿಯಲ್ಲಿರುತ್ತಾರೆ. ಪ್ರಸ್ತುತ ಎನ್.ಪಿ.ಎಸ್ ಲೈಟ್ ಎನ್ನುವ ಪಿಂಚಣಿ ಯೋಜನೆಯನ್ನು ಅಸಂಘಟಿತ ಕಾರ್ಮಿಕರಿಗೆ ಜಾರಿಗೊಳಿಸಲಾಗಿದೆ.

**ತಾಂತ್ರಿಕ ಸಲಹಾ ಸಮಿತಿಯ ಅಧಿಕಾರಿ / ಅಧಿಕಾರೇತರ ಸದಸ್ಯರುಗಳ ಪಟ್ಟಿ**

| ಕ್ರ. ಸಂ. | ಹೆಸರುಗಳು | ಅಧಿಕಾರಿ / ಅಧಿಕಾರೇತರ | ಪದನಾಮ |
|---|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ಕಾರ್ಮಿಕ ಇಲಾಖೆ | ಅಧಿಕಾರಿ | ಅಧ್ಯಕ್ಷರು |
| 2. | ಕಾರ್ಯದರ್ಶಿ(ವೆಚ್ಚ), ಆರ್ಥಿಕ ಇಲಾಖೆ | ಅಧಿಕಾರಿ | ಸದಸ್ಯರು |
| 3. | ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಅಧಿಕಾರಿ | ಸದಸ್ಯರು |
| 4. | ಜಂಟಿ / ಉಪ ಕಾರ್ಯದರ್ಶಿ, ಯೋಜನಾ ಇಲಾಖೆ | ಅಧಿಕಾರಿ | ಸದಸ್ಯರು |
| 5. | ಜಂಟಿ / ಉಪ ಕಾರ್ಯದರ್ಶಿ, ಕಂದಾಯ ಇಲಾಖೆ | ಅಧಿಕಾರಿ | ಸದಸ್ಯರು |
| 6. | ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ | ಅಧಿಕಾರಿ | ಸದಸ್ಯರು |
| 7. | ನಿರ್ದೇಶಕರು, ಕಾರ್ಖಾನೆಗಳು ಮತ್ತು ಬಾಯ್ಲರುಗಳು ಕಾರ್ಮಿಕ ಇಲಾಖೆ | ಅಧಿಕಾರಿ | ಸದಸ್ಯರು |
| 8. | ಶ್ರೀಮತಿ ಅನುಜಾ.ಎಸ್., ಅಸಿಸ್ಟೆಂಟ್ ಪ್ರೊಫೆಸರ್, ನ್ಯಾಷನಲ್ ಲಾ ಸಕೂಲ್ ಆಫ್ ಇಂಡಿಯಾ ಯುನಿವರ್ಸಿಟಿ | ಅಧಿಕಾರೇತರ | ಸದಸ್ಯರು |
| 9. | ಡಾ: ಕೆ.ಎಸ್. ನಂಜುಂಡ ರಾವ್, ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್ | ಅಧಿಕಾರೇತರ | ಸದಸ್ಯರು |
| 10 | ಮೆ: ಲಾರ್ಸೆನ್ ಅಂಡ್ ಟೋಬ್ರೋ ಲಿಮಿಟೆಡ್, ಇ.ಸಿ.ಸಿ. ವಿಭಾಗ, ಬೆಂಗಳೂರು. | ಅಧಿಕಾರೇತರ | ಸದಸ್ಯರು |
| 11 | ಅಧ್ಯಕ್ಷರು / ಕಾರ್ಯದರ್ಶಿ, ಇಂಡಿಯನ್ ನ್ಯಾಷನಲ್ ಟ್ರೇಡ್ ಯುನಿಯನ್ ಕಾಂಗ್ರೆಸ್ (ಐ.ಎನ್.ಟಿ.ಯು.ಸಿ), ಬೆಂಗಳೂರು (ಕಾರ್ಮಿಕ ಪ್ರತಿನಿಧಿ) | ಅಧಿಕಾರೇತರ | ಸದಸ್ಯರು |
| 12 | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಬೆಂಗಳೂರು. | ಅಧಿಕಾರೇತರ | ಸದಸ್ಯ ಕಾರ್ಯದರ್ಶಿ |

**ಕಟ್ಟಡ ಮತ್ತು ಇತರೆ ಕಾರ್ಮಿಕರ ಯೋಜನಾ ನಿಯಂತ್ರಣಾ ಮಂಡಳಿಯ ಪ್ರಕಾರ್ಯಗಳು ಈ ಕೆಳಗಿನಂತಿವೆ:**

- ❖ ವಿಷಯದ ಟೆಂಡರುಗಳು ಮತ್ತು ಕ್ಲೇಮುಗಳು, ಅಂದಾಜುಗಳು, ಉಸ್ತುವಾರಿ ಮತ್ತು ಯೋಜನೆ ಈ ಎಲ್ಲಾ ವಿಷಯಗಳಲ್ಲಿ ತಾಂತ್ರಿಕ ಸಮಿತಿಯು ಪರಾಮರ್ಶಿಸಿ ಶಿಫಾರಸ್ಸನ್ನು ನೀಡುವುದು.
- ❖ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ವಲಯದ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಮಂಡಳಿಯು ಚರ್ಚಿಸಲು ಅಧಿಕಾರ ಹೊಂದಿರುತ್ತದೆಯಲ್ಲದೇ ಮತ್ತು ತಾಂತ್ರಿಕ ಸಮಿತಿಯ ಅಧ್ಯಕ್ಷರ ಸಲಹೆಗಾಗಿ ಯಾವುದೇ ಕಡತವನ್ನು ಕಳುಹಿಸಲು ನಿರ್ದೇಶನ ನೀಡಬಹುದಾಗಿದೆ.
- ❖ ವ್ಯವಹರಣೆ ನಿಯಮಗಳ ಪ್ರಕಾರ ಸಚಿವ ಸಂಪುಟಕ್ಕೆ ತೆಗೆದುಕೊಂಡು ಹೋಗುವ ಪ್ರಕರಣಗಳನ್ನು ಹೊರತುಪಡಿಸಿ ಮಂಡಳಿಯು ಅನುಮೋದನೆ ನೀಡಿದ ವಿಷಯಗಳ ಬಗ್ಗೆ ಅವಶ್ಯವಿರುವ ಸರ್ಕಾರಿ ಆದೇಶಗಳನ್ನು ಕಾರ್ಮಿಕ ಇಲಾಖೆಯು ನೇರವಾಗಿ ಹೊರಡಿಸತಕ್ಕದ್ದು.
- ❖ ಸಚಿವ ಸಂಪುಟದ ಅನುಮೋದನೆ ಅತ್ಯಗತ್ಯವಿರುವ ಪ್ರಕರಣಗಳಲ್ಲಿ ಮಂಡಳಿಯು ಅನುಮೋದನೆ ನೀಡಿದ ತರುವಾಯ ಕಾರ್ಮಿಕ ಇಲಾಖೆಯು ಅಂತಹ ಪ್ರಕರಣಗಳನ್ನು ನೇರವಾಗಿ ಸಚಿವ ಸಂಪುಟಕ್ಕೆ ಮಂಡಿಸತಕ್ಕದ್ದು

ಈ ಎಲ್ಲಾ ಮಂಡಳಿಗಳು ಮತ್ತು ಸಮಿತಿಗಳ ಸಭೆಗಳಲ್ಲಿ ಸಾರ್ವಜನಿಕರಿಗೆ ಪ್ರವೇಶ ಕಲ್ಪಿಸಲಾಗುವುದಿಲ್ಲ. ನಿರ್ದಿಷ್ಟ ವಿಷಯಗಳಲ್ಲಿ ವಿಶೇಷ ಜ್ಞಾನ ಪಡೆದಿರುವಂತಹವರಿಗೆ ಮಾತ್ರ ಮಂಡಳಿಗಳ, ಕೌನ್ಸಿಲ್‌ಗಳ, ಸಮಿತಿಗಳ ಮತ್ತು ಇತರೆ ನಿಕಾಯಗಳ ಸದಸ್ಯರುಗಳಿಗೆ ಸಭೆಗಳಲ್ಲಿ ಭಾಗವಹಿಸಲು ಅವಕಾಶವಿದೆ. ಅಂತಹ ಸಭೆಗಳ ನಡವಳಿಗಳು ಅಥವಾ ಸಭೆಯ ಟಿಪ್ಪಣಿಗಳು ಸಾರ್ವಜನಿಕರಿಗೆ ಲಭ್ಯವಾಗುವುದಿಲ್ಲ.

**(9) ಅಧಿಕಾರಿ / ಸಿಬ್ಬಂಧಿಯ ಮಾಸಿಕ ಸಂಭಾವನೆ ಮತ್ತು ಸೂಚಿ:–**

| ಕ್ರ ಸಂ | ಅಧಿಕಾರಿ / ಸಿಬ್ಬಂಧಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ವೇತನ ಶ್ರೇಣಿ | ಒಟ್ಟು ವೇತನ | ವಿಳಾಸ | |
|---|---|---|---|---|---|---|
| | | | | | ಕಛೇರಿ | ಮನೆ |
| | | | ಅಪರ ಮುಖ್ಯ ಕಾರ್ಯದರ್ಶಿ ರವರ ಆಪ್ತ ಶಾಖೆ | | | |
| 1. | ಪಿ.ಬಿ. ರಾಮಮೂರ್ತಿ | ಅಪರ ಮುಖ್ಯ ಕಾರ್ಯದರ್ಶಿ(ಪ್ರ) | 80,000–80,000 | 80,000 | ನಂ. 414, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 2254984 22035004 | ನಂ. 25,ಕೃಷ್ಣಗಾರ್ಡೆನಿಯಾ ಅಪಾರ್ಟ್‌ಮೆಂಟ್ಸ್, 5ಮೇನ್, ಆರ್.ಎಂ.ವಿ. 2ನೇ ಸ್ಟೇಜ್, ಬೆಂ.–94 ದೂ:(ಮನೆ) ಇಮೇಲ್: secy-labour @karnataka.gov.in |
| 2. | ಜಯಲಕ್ಷ್ಮಿ | ಆಪ್ತ ಕಾರ್ಯದರ್ಶಿ | 40,050 – 56,550 | 46,500 | | ನಂ. 341, ಬೆನಕ, 7ನೇ ಕ್ರಾಸ್, NGEF ಲೇಔಟ್, ನಾಗರಬಾವಿ, ಬೆಂ.–72 |
| 3. | ಪುಷ್ಪಲತ.ಎಲ್ | ಶೀಘ್ರಲಿಪಿಗಾರ್ತಿ | 16,000 – 29,600 | 18,000 | | ನಂ. 13, ಅಯ್ಯಪ್ಪ ನಗರ ಮೇನ್ ರೋಡ್, ಡಾಕ್ಟರ್ಸ್ ಕಾಲೋನಿ, ಕೋಣನಕುಂಟೆ ಬೆಂಗಳೂರು–62. |
| 4. | ನಂಜುಂಡಸ್ವಾಮಿ | ದಲಾಯತ್ | 9,600 – 14,550 | 21,286 | | ಎಂ.ಜಿ.ದೊಡ್ಡಿ, ಹೊಂಗನೂರು ಪೋಸ್ಟ್, ಚನ್ನಪಟ್ಟಣ ತಾ: ರಾಮನಗರ ಜಿಲ್ಲೆ ದೂ:9535426264 |
| 5. | ಖಾಲಿ ಇದೆ | ವಾಹನ ಚಾಲಕರು | | | | |
| | | | ಉಪ ಕಾರ್ಯದರ್ಶಿ (1) ರವರ ಆಪ್ತ ಶಾಖೆ | | | |
| 1. | ಇ. ಶಿವಾನಂದ | ಉಪಕಾರ್ಯದರ್ಶಿ | 40,050–56,550 | 79,675 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035031 22035033 | ನಂ. 838, 7ನೇ ಮೇನ್, ಹೆಚ್.ಎಸ್.ಆರ್. ಸೆಕ್ಟರ್–3, ಬೆಂಗಳೂರು–102 ಇಮೇಲ್: ds@gmail.com ಮೊ: 9844773633 |
| 2. | ಪದ್ಮ. ಎನ್ | ಆಪ್ತ ಸಹಾಯಕರು | 20,000–36,300 | 30,815 | | ನಂ. 198, 4ನೇ ಮುಖ್ಯ ರಸ್ತೆ, 6ನೇ ಅಡ್ಡ ರಸ್ತೆ, ಹೆಚ್.ಎ.ಎಲ್. 3ನೇ ಹಂತ, ಹೊಸತಿಪ್ಪಸಂದ್ರ, ಬೆಂಗಳೂರು–75. ಇಮೇಲ್: padmajamanjunath @gmail.com ಮೊ: 9481423384 |
| 3. | ಹರೀಶ | ಕಿರಿಯ ಸಹಾಯಕರು | 11,800 –21,000 | 18,268 | | ನಂ.28, 1ನೇ ಮೇನ್, ಜೆ.ಸಿ.ನಗರ, ಮಹಾಲಕ್ಷ್ಮಿ ಪುರಂ, ಬೆಂಗಳೂರು–86. ಇಮೇಲ್: harishadagur@ gmail.com ಮೊ: 9141530805 |
| 4. | ಖಾಲಿ ಇದೆ | ದಲಾಯತ್ | | | | |

| ಕ್ರ ಸಂ | ಅಧಿಕಾರಿ / ಸಿಬ್ಬಂಧಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ವೇತನ ಶ್ರೇಣಿ | ಒಟ್ಟು ವೇತನ | ವಿಳಾಸ | |
|---|---|---|---|---|---|---|
| | | | | | ಕಛೇರಿ | ಮನೆ |
| **ಉಪ ಕಾರ್ಯದರ್ಶಿ(2) ರವರ ಆಪ್ತ ಶಾಖೆ** | | | | | | |
| 1. | ಆರ್. ಶಿವಲಿಂಗಯ್ಯ | ಉಪಕಾರ್ಯದರ್ಶಿ | 40,000 – 56,500 | 65,632 | ನಂ.416, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ದೂ: 22034773 | ನಂ. ಎಂ.ಎಸ್. 33/I, ಲೋಕೋಪಯೋಗಿ ವಸತಿ ಗೃಹ, ನಂದಿನಿ ಬಡಾವಣೆ (ಪಶ್ಚಿಮ), ಬೆಂ.–92. ದೂ: ಇಮೇಲ್: jseclabour@gmail.com |
| 2. | ಖಾಲಿ ಇದೆ | ಶೀಘ್ರಲಿಪಿಗಾರ್ತಿ | | | | |
| 3. | ಖಾಲಿ ಇದೆ | ಕಿರಿಯ ಸಹಾಯಕ | | | | |
| 4. | ಖಾಲಿ ಇದೆ | ದಲಾಯತ್ | | | | |
| **ಉಪ ವಿಶೇಷಾಧಿಕಾರಿ (ಬಾಲ ಕಾರ್ಮಿಕ ಕೋಶ)(ಪೀಠಾಧಿಕಾರಿ–6) ರವರ ಶಾಖೆ** | | | | | | |
| 1. | ಆರ್. ಸಾವಿತ್ರಿ | ಉಪ ವಿಶೇಷಾಧಿಕಾರಿ (ಪೀಠಾಧಿಕಾರಿ–6) (ಅನ್ಯ ಕರ್ತವ್ಯದ ನಿಮಿತ್ತ) | 36,300 – 53,850 | 87,829 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035027 | ಕೇರಾಫ್ ಎನ್ ಮಂಜುನಾಥ್, ನಂ. 129, 3ನೇ ಮೇನ್, 9 ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು–18. |
| 2. | ಖಾಲಿ ಇದೆ | ಶೀಘ್ರಲಿಪಿಗಾರ್ತಿ | | | | |
| 3. | ಖಾಲಿ ಇದೆ | ಹಿ. ಸಹಾಯಕರು | | | | |
| 4. | ವಾಣಿ | ಸಹಾಯಕರು | 16,000 – 29,600 | 27,277 | | ನಂ. 587, 3ನೇ ಕ್ರಾಸ್, 7ನೇ ಮೇನ್, ಮನುವನ, ವಿಜಯ ನಗರ, ಬೆಂಗಳೂರು–40. maysanjana@gmail.com |
| 6. | ಖಾಲಿ ಇದೆ | ಕಿರಿಯ ಸಹಾಯಕ | | | | |
| 7. | ಖಾಲಿ ಇದೆ | ದಲಾಯತ್ | | | | |
| **ಅಧೀನ ಕಾರ್ಯದರ್ಶಿ (ಕಾರ್ಖಾನೆ ಮತ್ತು ಬಾಯ್ಲರ್ಸ್) (ಪೀಠಾಧಿಕಾರಿ–1) ರವರ ಶಾಖೆ** | | | | | | |
| 1. | ಬೋರಯ್ಯ | ಅಧೀನಕಾರ್ಯದರ್ಶಿ (ಪೀಠಾಧಿಕಾರಿ–1) | 28,100 – 50,100 | 56,572 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035021 | ನಂ. 15/I, 1ನೇ ಮೇನ್ ರೋಡ್, 2ನೇ ಮಹಡಿ, ಗಂಗಮ್ಮ ಗುಡಿ ಬೀದಿ, ಅಶೋಕ ನಗರ, ಬೆಂ.–50. ಇಮೇಲ್: boraiahdo1@gmail.com |
| 2. | ಖಾಲಿ ಇದೆ | ಶೀಘ್ರಲಿಪಿಗಾರ್ತಿ | | | | |
| 3. | ಬಂದೇ ನವಾಜ್ | ಹಿರಿಯ ಸಹಾಯಕರು | 20,000 – 26, 000 | 35,600 | | ನಂ.37, 2ನೇ ಮುಖ್ಯ ರಸ್ತೆ, 1ನೇ ಕ್ರಾಸ್, ದಿಣ್ಣೂರು, ಆರ್.ಟಿ.ನಗರ, ಬೆಂಗಳೂರು–32 |
| 4. | ಮೇಘನಾ.ಎನ್ | ಸಹಾಯಕರು | 16,000 – 29,600 | 27,102 | | 20/41, 2ನೇ ಕ್ರಾಸ್, ಕೆ.ವಿ. ಲೇಔಟ್, 4ನೇ ಬ್ಲಾಕ್, ಜಯನಗರ, ಬೆಂ.–11 |
| 5. | ರಮೇಶ್ | ಕಿರಿಯ ಸಹಾಯಕರು | 11,600 – 21,000 | 18,268 | | ನಂ.22, 12ನೇ ಮುಖ್ಯ ರಸ್ತೆ, 2ನೇ ಕ್ರಾಸ್, ಜೆ.ಸಿ.ನಗರ, ಕುರುಬರ ಹಳ್ಳಿ, ಬೆಂಗಳೂರು–86. |
| 6. | ಖಾಲಿ ಇದೆ | ದಲಾಯತ್ | | | | |
| **ಅಧೀನ ಕಾರ್ಯದರ್ಶಿ (ಕನಿಷ್ಠ ವೇತನ) (ಪೀಠಾಧಿಕಾರಿ–2) ರವರ ಶಾಖೆ** | | | | | | |
| 1. | ಪಿ. ನಾಗರತ್ನಮ್ಮ | ಅಧೀನಕಾರ್ಯದರ್ಶಿ (ಪ್ರ)(ಪೀಠಾಧಿಕಾರಿ2) | 28,100 – 50,100 | 52,495 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22034972 | ನಂ. 758, 8ನೇ ಮೇನ್, 9ನೇ ಬ್ಲಾಕ್, 2ನೇ ಹಂತ, ನಾಗರಬಾವಿ, ಬೆಂ.72. ಇಮೇಲ್: |
| 2. | ಖಾಲಿ ಇದೆ | ಶೀಘ್ರಲಿಪಿಗಾರ್ತಿ | | | | |
| 3. | ಖಾಲಿ ಇದೆ | ಕಿರಿಯ ಸಹಾಯಕ | | | | |
| 4. | ಖಾಲಿ ಇದೆ | ದಲಾಯತ್ | | | | |
| **ಅಧೀನ ಕಾರ್ಯದರ್ಶಿ (ಸೇವಾ ವಿಷಯ) (ಪೀಠಾಧಿಕಾರಿ–3) ರವರ ಶಾಖೆ** | | | | | | |
| 1. | ಪಿ. ನಾಗರತ್ನಮ್ಮ | ಅಧೀನಕಾರ್ಯದರ್ಶಿ | 28,100 – 50,100 | 52,495 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22034985 | ನಂ. 758, 8ನೇ ಮೇನ್, 9ನೇ ಬ್ಲಾಕ್, 2ನೇ ಹಂತ, ನಾಗರಬಾವಿ, ಬೆಂ.72. ಇಮೇಲ್: labour.do3@gmail.com |

| ಕ್ರ ಸಂ | ಅಧಿಕಾರಿ / ಸಿಬ್ಬಂಧಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ವೇತನ ಶ್ರೇಣಿ | ಒಟ್ಟು ವೇತನ | ವಿಳಾಸ | |
|---|---|---|---|---|---|---|
| | | | | | ಕಛೇರಿ | ಮನೆ |
| 2. | ಗೀತ.ಎನ್ | ಶೀಘ್ರಲಿಪಿಗಾರ್ತಿ | 16,000 – 29,600 | 26,363 | | ನಂ.15/1, 1ನೇ ಕ್ರಾಸ್, 3ನೇ ಮೇನ್, ಕಲ್ಯಾಣ ನಗರ, ಮೂಡಲಪಾಳ್ಯ, ಬೆಂ.–72. |
| 3. | ನಾಗರಾಜ್ | ಹಿರಿಯ ಸಹಾಯಕರು | 20,000– 36,300 | 36,084 | ನಂ.416, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22034985 | ನಂ.921/ಡಿ, 2ನೇ 'ಎ' ಕ್ರಾಸ್, 15ನೇ ಎ ಮೇನ್, 1ನೇ ಹಂತ, 3ನೇ ಬ್ಲಾಕ್, ಬಸವೇಶ್ವರನಗರ, ಬೆಂ–79. |
| 4. | ಖಾಲಿ ಇದೆ | ಬೆರಳಚ್ಚುಗಾರ್ತಿ | | | | |
| 5. | ಚಂದ್ರಕಾಂತ್ | ಕಿರಿಯ ಸಹಾಯಕರು | 11,600 – 21,000 | 20,080 | | ನಂ.5/2, 3ನೇ ಕ್ರಾಸ್, ಅತ್ತಿಗುಪ್ಪೆ, ನೇತಾಜಿನಗರ, ವಿಜಯನಗರ 2ನೇ ಹಂತ, ಬೆಂ– 40. |
| 6. | ಖಾಲಿ ಇದೆ | ದಲಾಯತ್ | | | | |
| **ಪೀಠಾಧಿಕಾರಿ – 4 (ಉದ್ಯೋಗ ಮತ್ತು ತರಬೇತಿ) ರವರ ಶಾಖೆ** | | | | | | |
| 1. | ವಿ. ಪ್ರಕಾಶ್ | ಪೀಠಾಧಿಕಾರಿ | 22,800 – 43,200 | 45,246 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035024 | ನಂ. 53, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರ ನಗರ, ಬೆಂ.–79. ಮೊ: 9916494500 ಇಮೇಲ್: do4@labour.com |
| 2. | ಸುನಿತ.ಬಿ. | ಸಹಾಯಕರು | 16,000 – 29,600 | 27,102 | | ನಂ. 750, 1ನೇ ಮೇನ್, 7ನೇ ಬ್ಲಾಕ್, 2ನೇ ಘಟ್ಟ, ಬನಶಂಕರಿ 3ನೇ ಹಂತ, ಬೆಂ.–85. ಮೊ: 9945574652 |
| 3. | ಆರ್. ಬಸವರಾಜು | ಸಹಾಯಕರು | 16,000 – 29,600 | 27,102 | | ನಂ. 163, 4ನೇ ಮುಖ್ಯ ರಸ್ತೆ, 4ನೇ ಅಡ್ಡ ರಸ್ತೆ, ಸಂಪಿಗೆ ಬಡಾವಣೆ, ವಿಜಯನಗರ ಉತ್ತರ, ಬೆಂಗಳೂರು–79. ಮೊ: 9008019353 |
| 4. | ಹೆಚ್.ಎ. ಸಿದ್ದಲಿಂಗಯ್ಯ | ಬೆರಳಚ್ಚುಗಾರರು | 11,600 – 21,000 | 19,460 | | ನಂ. 7,ಸಾವಿತ್ರಿ ನಿಲಯ, 3ನೇ ಮೇನ್,9ನೇಕ್ರಾಸ್, ಬೃಂದಾವನ ನಗರ, ಮತ್ತೀಕೆರೆ, ಬೆಂ.–54. ಮೊ: 9880726673. |
| 5. | ಖಾಲಿ ಇದೆ | ದಲಾಯತ್ | | | | |
| **ಪೀಠಾಧಿಕಾರಿ – 5 (ಕಾ. ರಾ. ವಿ. ಯೋ ಮತ್ತು ಕೈ.ವಿ.ನಿ.) ರವರ ಶಾಖೆ** | | | | | | |
| 1. | ವಿ. ನಾಗೇಶರಾವ್ | ಪೀಠಾಧಿಕಾರಿ | 22,800 – 43,000 | 37,546 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035022 | ನಂ. 131, ಶ್ರೀ ರೇಣುಕಾ ನಿಲಯ, 2ನೇ 'ಸಿ' ಕ್ರಾಸ್, 5ನೇ ಬ್ಲಾಕ್, ನಾಗರಬಾವಿ 2ನೇ ಹಂತ,ಬೆಂಗಳೂರು–72 |
| 2. | ಲಕ್ಷ್ಮೀದೇವಿ | ಹಿ. ಸಹಾಯಕರು | 20,000 – 36,300 | 37,671 | | ಪಿಳ್ಳಪ್ಪ ಸರ್ಕಲ್, ನ್ಯೂ ಡೈಮಂಡ್ ಟೈಲರ್ ಶಾಪ್, ಅಬ್ಬಿಗೆರೆ, ಚಿಕ್ಕಬಾಣಾವಾರ ಪೋಸ್ಟ್, ಬೆಂಗಳೂರು–90 |
| 3. | ಖಾಲಿ ಇದೆ | ಶೀಘ್ರಲಿಪಿಗಾರ್ತಿ | | | | |
| 4. | ಸುರೇಶ್ | ಸಹಾಯಕರು | 16,000 – 29,600 | 39,165 | | ನಂ.4, ಮನು, ದಾಸಪ್ಪ ಲೇ ಔಟ್, ರಾಮಮೂರ್ತಿ ನಗರ, ಬೆಂ.–16. ದೂ: 9480588728 |

| ಕ್ರ ಸಂ | ಅಧಿಕಾರಿ / ಸಿಬ್ಬಂಧಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ವೇತನ ಶ್ರೇಣಿ | ಒಟ್ಟು ವೇತನ | ವಿಳಾಸ | |
|---|---|---|---|---|---|---|
| | | | | | ಕಛೇರಿ | ಮನೆ |
| 5. | ಮೊಹಮ್ಮದ್ ಪೀರ್ ಸಾಹೇಬ್ | ಕಿರಿಯ ಸಹಾಯಕರು | 11,600 – 21,000 | 24,006 | | ನಂ 880, 14ನೇ ಅಡ್ಡ ರಸ್ತೆ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು–86. ಮೊ: 9880379328 |
| 6. | ಖಾಲಿ ಇದೆ | ದಲಾಯತ್ | | | | |
| ಪೀಠಾಧಿಕಾರಿ – 7 ರವರ ಸ್ವೀಕೃತಿ/ರವಾನೆ ಮತ್ತು ಸಮನ್ವಯ ಶಾಖೆ | | | | | | |
| 1. | ಈ. ವಿಜಯಲಕ್ಷ್ಮಿ | ಪೀಠಾಧಿಕಾರಿ | 22,800 – 43,200 | 40,717 | ನಂ.411, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು. ದೂ: 22035032 | ನಂ.15/14, 15ನೇಮುಖ್ಯ ರಸ್ತೆ, ಪದ್ಮನಾಭ ನಗರ, ಬೆಂ–70 ದೂ: 26391537 ಮೊ: 9900615061 |
| 2. | ಖಾಲಿಇದೆ | ಶೀಘ್ರಲಿಪಿಗಾರರು | | | | |
| 3. | ಖಾಲಿಇದೆ | ಹಿ.ಸಹಾಯಕರು | | | | |
| 4. | ಪ್ರಶಾಂತ್ ಹೆಗಡೆ | ಸಹಾಯಕರು | 16,000 – 29,600 | 28,461 | | ಎಲ್.ಎಫ್ 48/2, ಲೋಕೋಪಯೋಗಿ ವಸತಿ ಗೃಹಗಳು, ನಂದಿನ ಬಡಾವಣೆ, ಬೆಂಗಳೂರು–560092. ಮೊ: 9844183747 |
| 5. | ಮಿಸ್ಬಾ ಕೌಸರ್ | ಬೆರಳಚ್ಚುಗಾರ್ತಿ | 11,600 – 21,000 | 19,460 | | ನಂ. 126, ಸೂರಜ್–ಅಲಿ–ಶಾಹ ದರ್ಗಾ ಎದುರು, ಟಿಪ್ಪುನಗರ, ರಾಮನಗರ. ಮೊ: 8095725346 |
| 6. | ವಲೀವುಲ್ಲಾ | ಜಮೇದಾರ್ | 11,000 – 19,000 | 24,306 | | ನಂ. 30, 2ನೇ ಕ್ರಾಸ್, 7ನೇ ಮೇನ್, ಬಿಲಾಲ್ ಮಸೀದಿ ಹತ್ತಿರ, ಶಾಮಣ್ಣ ಗಾರ್ಡನ್, ಎನ್.ಜಿ.ಹಳ್ಳಿ, ಬೆಂ–40. |

**10) ಕಾರ್ಮಿಕ ಇಲಾಖೆಗೆ ಆಯವ್ಯಯದ ಹಂಚಿಕೆ :–**

ಇಲಾಖೆಯ ಪ್ರತಿಯೊಂದು ಯೋಜನೆಗಳಿಗೆ ಆಯವ್ಯಯದ(ಅನುದಾನ) ಹಂಚಿಕೆಯನ್ನು ವಾರ್ಷಿಕ ಯೋಜನೆಯಲ್ಲಿ ಸೂಚಿಸಿದೆ. ಈ ಹಂಚಿಕೆಯು 12 ತಿಂಗಳ ಅವಧಿಗೆ ಮಾಡಿರುವುದಾಗಿದೆ ಮತ್ತು ಇದನ್ನು ರಾಜ್ಯ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು ಮಾಸಿಕ ಪರಾಮರ್ಶನೆ ಸಭೆಯ ಸಭೆಯಲ್ಲಿ ಮಾಹೆಯಾನ ಪರಾಮರ್ಶಿಸಲಾಗುತ್ತದೆ. ಮಾಸಿಕ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಯಲ್ಲಿ ಪ್ರತಿಯೊಂದು ಇಲಾಖೆಯು ಹಣಕಾಸಿನ ಮತ್ತು ಭೌತಿಕ ಕಾರ್ಯಕ್ರಮಗಳನ್ನು ಹಾಗೂ ಈ ದಿಶೆಯಲ್ಲಿ ಸಾಧಿಸಿದ ಪ್ರಗತಿಯನ್ನು ಮುಖ್ಯ ಕಾರ್ಯದರ್ಶಿಗಳಿಂದ ಪರಾಮರ್ಶಿಸಲಾಗುತ್ತದೆ.

**(11) ಸಹಾಯಧನ ಕಾರ್ಯಕ್ರಮ ಮತ್ತು ಫಲಾನುಭವಿಗಳ ವಿವರ:–**

ಕಾರ್ಮಿಕ ಇಲಾಖೆಯು ಯಾವುದೇ ನೇರವಾದ ಸಹಾಯಧನ ಕಾರ್ಯಕ್ರಮವನ್ನು ಹೊಂದಿರುವುದಿಲ್ಲ. ಆದರೆ, ಇಲಾಖೆಯ ಯೋಜನೆಯ ಮೇಲೆ ವಿನಿಯೋಗಿಸಿದ ಭಾರೀ ಮೊತ್ತಕ್ಕೆ ಹೋಲಿಸಿದಾಗ ಸಂಗ್ರಹಿಸಿದ ದರವು ಕೇವಲ ಅತ್ಯಲ್ಪವಾಗಿದೆ. ಇದು ರಾಜ್ಯದ ಜನರಿಗೆ ಒಟ್ಟು ಸಹಾಯ ಧನದ ಕಾರ್ಯಕ್ರಮವಾಗಿದೆ ಎಂದು ಪರಿಗಣಿಸಲಾಗಿದೆ.

**(12) ಇಲಾಖೆಯಿಂದ ಮಂಜೂರಾತಿ ನೀಡಿದ ರಿಯಾಯಿತಿಗಳು, ಪರವಾನಗಿಗಳು ಮತ್ತು ಅನುಮತಿಗಳು:–**

ಕಾರ್ಮಿಕ ಸಚಿವಾಲಯದಲ್ಲಿ ಇಂತಹ ಪ್ರಕರಣಗಳು ಇರುವುದಿಲ್ಲ.

**(13) ವಿದ್ಯುನ್ಮಾನ ರೂಪದಲ್ಲಿ ಲಭ್ಯವಾಗುವ ಇಲಾಖೆಯ ಮಾಹಿತಿ:–**

ರಾಷ್ಟ್ರೀಯ ಮಾಹಿತಿ ಕೇಂದ್ರವು ನಿರ್ವಹಣೆ ಮಾಡಿರುವಂತೆ ಕಾರ್ಮಿಕ ಇಲಾಖೆಯು ಹೊರತಂದಿರುವ ಅಂತರ್ ಜಾಲದಲ್ಲಿ ಕಾರ್ಮಿಕ ಇಲಾಖೆಯ ವಿವರಗಳು ದೊರಕಲಿವೆ. ಇಲಾಖೆಯ ಇಡೀ ವಿವರಗಳನ್ನು http://labour.kar.nic.in/labour-secretariat.htm ಈ ಅಂತರ್‌ಜಾಲಕ್ಕೆ ಮೊರೆ ಹೋಗಿ ಪಡೆಯಬಹುದಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಮತ್ತು ಪಾರದರ್ಶಕತೆ ಅಧಿನಿಯಮದ ಪ್ರಕಾರ ನಾಗರೀಕರು ಮಾಹಿತಿಯನ್ನು ಉಚಿತವಾಗಿ ಪಡೆಯಬಹುದಾಗಿದೆ.

**(14) ಮಾಹಿತಿ ಪಡೆಯಲು ನಾಗರೀಕರಿಗೆ ಇರುವ ಸೌಲಭ್ಯ:–**

ಸಾರ್ವಜನಿಕ ಸಂಗ್ರಹಣೆ ಮತ್ತು ಪಾರದರ್ಶಕತೆ ಕಾಯಿದೆ ಮತ್ತು ನಾಗರೀಕರ ಸನ್ನದು ಪ್ರಕಾರ ಇಲಾಖೆಯ ಬಗೆಗಿನ ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ಸ್ವಾತಂತ್ರ್ಯವಿದೆ.

**(16) ಇತರೆ ಮಾಹಿತಿ:**

ಈ ಸಚಿವಾಲಯವನ್ನು ಅಗತ್ಯ ಮಾಹಿತಿಗಾಗಿ ಈ ಕೆಳಕಂಡ ಈಮೇಲ್ ವಿಳಾಸಗಳ ಮೂಲಕ ಸಂಪರ್ಕಿಸಬಹುದಾಗಿದೆ:

ds_labour@yahoo.com ಮತ್ತು jseclabour@gmail.com

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು:–**

**ನಿರ್ಣಯ ತೆಗೆದುಕೊಳ್ಳುವ ಕಾರ್ಯವಿಧಾನ ಈ ಕೆಳಗಿನಂತಿರುತ್ತವೆ.**

- ❖ ವಿಷಯ ನಿರ್ವಾಹಕರು ಪ್ರಸ್ತಾವನೆ / ಪತ್ರಗಳು ಬಂದ ನಂತರ ಅವುಗಳನ್ನು ಪರಿಶೀಲಿಸಿ ಸಂಬಂಧಪಟ್ಟ ಕಡತಗಳೊಂದಿಗೆ ಮೇಲಾಧಿಕಾರಿಗೆ ಸಲ್ಲಿಸುವುದು. ಹೊಸದಾಗಿ ಬಂದ ಪ್ರಸ್ತಾವನೆಗಳಿಗೆ ಹೊಸ ಕಡತ ತೆರೆದು ಪರಿಶೀಲಿಸಿ ಸಲ್ಲಿಸುವುದು.
- ❖ ವಿಷಯ ನಿರ್ವಾಹಕರು ಕಡತದಲ್ಲಿ ಇರುವ ನಿಜಾಂಶಗಳನ್ನು ನಿಯಮಾನುಸಾರ ಪರಿಶೀಲಿಸಿ ಕೈಗೊಳ್ಳಬಹುದಾದಂತಹ ತೀರ್ಮಾನದ ಬಗ್ಗೆ ಟಿಪ್ಪಣಿ ತಯಾರಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸುವುದು.
- ❖ ಅಧೀನ ಕಾರ್ಯದರ್ಶಿಗಳು, ಶಾಖಾಧಿಕಾರಿಗಳು ನೀಡಿದ ಟಿಪ್ಪಣಿಯನ್ನು ಮತ್ತೆ ಪರಿಶೀಲಿಸಿ ಆ ಟಿಪ್ಪಣಿ ಅಸ್ತಿತ್ವದಲ್ಲಿರುವ ನಿಯಮ / ಕಾಯಿದೆ, ಸುತ್ತೋಲೆ ಪ್ರಕಾರ ಇರುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಅವಶ್ಯಕತೆ ಇದ್ದಲ್ಲಿ ಅಧೀನ ಕಛೇರಿಗಳಿಂದ ಮತ್ತು ಇತರೆ ಇಲಾಖೆಗಳಿಂದ ಮಾಹಿತಿ ಪಡೆಯುವುದು. ಅವರಿಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ನಿರ್ಣಯ ತೆಗೆದುಕೊಳ್ಳುವುದು.
- ❖ ಉಪಕಾರ್ಯದರ್ಶಿಯವರು ಕಾರ್ಯದರ್ಶಿಗಳಿಗೆ ಕಡತವನ್ನು ಸಲ್ಲಿಸುವ ಮೊದಲು ಕೆಳಗಿನ ಅಧಿಕಾರಿಗಳು ನೀಡಿದ ಟಿಪ್ಪಣಿ ಹಿನ್ನಲೆಯಲ್ಲಿ ಆ ಪ್ರಕರಣಗಳಿಗೆ ಸಂಬಂಧಪಟ್ಟ ನಿರ್ಣಯವನ್ನು ತೆಗೆದುಕೊಳ್ಳುವ ಬಗ್ಗೆ ಅವರ ಅಭಿಪ್ರಾಯವನ್ನು ನೀಡಿ ಕಡತಗಳನ್ನು ಕಾರ್ಯದರ್ಶಿಗಳಿಗೆ ಸಲ್ಲಿಸುವುದು. ಅಧೀನ ಅಧಿಕಾರಿಗಳಿಂದ ಮಾಹಿತಿಯನ್ನು ಪಡೆಯುವುದು. ತಮಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿರ್ಣಯ ತೆಗೆದುಕೊಳ್ಳುವುದು.
- ❖ ಕಾರ್ಯದರ್ಶಿಗಳು ಕಡತ ಬಂದ ನಂತರ ಟಿಪ್ಪಣಿಗಳನ್ನು ಪರಿಶೀಲಿಸಿ ನಿಯಮಾನುಸಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು. ಕರ್ನಾಟಕ ಸರ್ಕಾರ (ವ್ಯವಹಾರ ಮತ್ತು ನಿರ್ವಹಣೆ) ನಿಯಮದಂತೆ ಕಡತಗಳನ್ನು ಮಾನ್ಯ ಮಂತ್ರಿಗಳಿಗೆ ಸಲ್ಲಿಸುವುದು ಮತ್ತು ಸಚಿವ ಸಂಪುಟಕ್ಕೆ ಸಲ್ಲಿಸುವುದು.
- ❖ ಕಡತದಲ್ಲಿ ನಿರ್ಣಯ ತೆಗೆದುಕೊಂಡ ನಂತರ ಸರ್ಕಾರಿ ಆದೇಶಗಳನ್ನು ಅಧೀನ ಕಾರ್ಯದರ್ಶಿಗಳಿಂದ ಹೊರಡಿಸುವುದು.

**ಪರಿವೀಕ್ಷಣೆ ಮತ್ತು ಜವಾಬ್ದಾರಿ:–**

ವಿಷಯ ನಿರ್ವಾಹಕರ ಕಾರ್ಯವನ್ನು ಶಾಖಾಧಿಕಾರಿಗಳು ಪರಿವೀಕ್ಷಣೆ ಮಾಡುತ್ತಾರೆ. ಶಾಖಾಧಿಕಾರಿಗಳ ಕಾರ್ಯವನ್ನು ಅಧೀನ ಕಾರ್ಯದರ್ಶಿ ಪರಿವೀಕ್ಷಣೆ ಮಾಡುತ್ತಾರೆ. ಅಧೀನ ಕಾರ್ಯದರ್ಶಿಗಳ ಕಾರ್ಯವನ್ನು ಉಪ ಕಾರ್ಯದರ್ಶಿಯವರು ಪರಿವೀಕ್ಷಣೆ ಮಾಡುತ್ತಾರೆ. ಉಪ ಕಾರ್ಯದರ್ಶಿಯವರ ಕಾರ್ಯವನ್ನು ಕಾರ್ಯದರ್ಶಿಗಳು ಪರಿವೀಕ್ಷಣೆ ಮಾಡುತ್ತಾರೆ. ಕಾರ್ಯದರ್ಶಿಗಳ ಕಾರ್ಯವನ್ನು ಮಾನ್ಯ ಕಾರ್ಮಿಕ ಸಚಿವರು ಪರಿವೀಕ್ಷಣೆ ಮಾಡುತ್ತಾರೆ. ಇದೇ ರೀತಿಯಲ್ಲಿ ಇಲಾಖೆಯಲ್ಲಿ ಪ್ರತಿ ಅಧಿಕಾರಿ ತಮ್ಮ ತಮ್ಮ ಕಾರ್ಯಗಳಿಗೆ ಜವಾಬ್ದಾರರಾಗಿರುತ್ತಾರೆ. ಅಲ್ಲದೆ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಲು ಜವಾಬ್ದಾರರಾಗಿರುತ್ತಾರೆ.

**ಕರ್ತವ್ಯಗಳ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಸೂತ್ರಗಳು:–**

1. **ದಲಾಯತ್:–** ಇವರಿಗೆ ವಹಿಸಿದ ಪತ್ರಗಳನ್ನು / ಕಡತಗಳನ್ನು ಅದೇ ದಿನ ಅಧಿಕಾರಿಗಳ ಸೂಚನೆಯಂತೆ ಆಯಾ ಅಧಿಕಾರಿಗಳಿಗೆ ಮತ್ತು ಇಲಾಖೆಗಳಿಗೆ ನೀಡುವುದು.
2. **ವಿಷಯ ನಿರ್ವಾಹಕರು:–** ಇವರು ತಮಗೆ ನೀಡಿದ ಕಾಗದ ಪತ್ರಗಳನ್ನು ಮತ್ತು ಕಡತಗಳನ್ನು ಐದು ದಿನಗಳ ಒಳಗೆ ಸಚಿವಾಲಯ ಕೈಪಿಡಿಯಂತೆ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಶಾಖಾಧಿಕಾರಿಗಳು, ಅಧೀನ ಕಾರ್ಯದರ್ಶಿಗಳ ಮತ್ತು
3. **ಉಪ ಕಾರ್ಯದರ್ಶಿಯವರು:–** ಇವರು ಕಡತವನ್ನು ಪಡೆದು ಪರಿಶೀಲಿಸಿ ಆದ್ಯತೆ ಮೇಲೆ ವಿಷಯಗಳನ್ನು ವರ್ಗೀಕರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಬಾಕಿ ಇರುವ ಕಡತಗಳನ್ನು ವಿಲೇವಾರಿ ಮಾಡಲು ಕ್ರಮ ತೆಗೆದುಕೊಳ್ಳುವುದು, ಕಾರ್ಯದರ್ಶಿಗಳ ಆದ್ಯತೆ ಮೇಲೆ ಕಡತಗಳನ್ನು ವಿಲೇವಾರಿ ಮಾಡುವುದು.

**ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ:–**

- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ / ಕಛೇರಿ ಕೈಪಿಡಿ.
- ❖ ಕರ್ನಾಟಕ ಸರ್ಕಾರ ವ್ಯವಹಾರ ನಿರ್ವಹಣೆ ನಿಯಮಾವಳಿ.
- ❖ ಕರ್ನಾಟಕ ಸರ್ಕಾರ ವ್ಯವಹಾರ ಹಂಚಿಕೆ ನಿಯಮಾವಳಿಗಳು.
- ❖ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
- ❖ ಕರ್ನಾಟಕ ಸರ್ಕಾರ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು.
- ❖ ಕರ್ನಾಟಕ ಆರ್ಥಿಕ ಸಂಹಿತೆ.
- ❖ ಭೂಸ್ವಾಧೀನ ಕಾಯ್ದೆ.
- ❖ ಉಗ್ರಾಣ ಕೈಪಿಡಿ,
- ❖ ಮಧ್ಯಸ್ಥಿಕೆ ಕಾಯ್ದೆ 1996 ಮತ್ತು 1940.
- ❖ ಸಾದಿಲ್ವಾರು ವೆಚ್ಚದ ಕೈಪಿಡಿ,
- ❖ ಕರ್ನಾಟಕ ಖಜಾನೆ ಸಂಹಿತೆ,
- ❖ ಚಾಲ್ತಿ ದರಪಟ್ಟಿ,

